ಶ್ರೀಃ

ಶ್ರೀ ಕಲ್ಕಿಸಿಂಹ ಭಗವತ್ಪ್ರಬನ್ಧಮಾಲಾ

ಶ್ರೀ ಶಠಾರಿಮುನಿ ವಿರಚಿತವಾದ

# ತಿರುವಾಯ್ಮೊೞಿ

ಎಂಬ

## ಸಹಸ್ರಗಾಥಾತ್ಮಕ - ದ್ರಾವಿಡ ದಿವ್ಯಪ್ರಬನ್ಧ

ಶ್ರೀ ಕಲ್ಕಿಸಿಂಹಭಗವದ್ವಿರಚಿತವಾದ—(೧) ಕನ್ನಡಪ್ರತಿಪದಾರ್ಥ

(೨) ಸಂಸ್ಕೃತಪದ್ಯಾತ್ಮಕ—ಸಹಸ್ರಗಾಥಾರತ್ನಾವಳೀ

(೩) ಕನ್ನಡತಾತ್ಪರ್ಯ—ಸಮೇತ

(ದ್ರಮಿಡೋಪನಿಷತ್ಸಂಗತಿ-ದ್ರಮಿಡೋಪನಿಷತ್ತಾತ್ಪರ್ಯರತ್ನಾವಳೀ-ಸಹಿತ)

೩ನೆಯ ಸಂಚಿಕೆ

## ತೃತೀಯ ಶತಕ

(ಸವ್ಯಾಖ್ಯಾನ)

ಬೆಂಗಳೂರು

ವೆ. ಬಿ ಸುಬ್ಬಯ್ಯ ಅಂಡ್ ಸನ್ಸ್ ಯವರ
ಎಲೆಕ್ಟ್ರಿಕ್ ಮುದ್ರಾಕ್ಷರಶಾಲೆಯಲ್ಲಿ ಮುದ್ರಿಸಲ್ಪಟ್ಟಿತು.

1930

೧೦ ಸಂಚಿಕೆಗಳುಳ್ಳ
ಸಮಗ್ರ-ಪ್ರಬನ್ಧದ ಕ್ರಯ
ರೂ. 6-0-0

ಈ ಸಂಚಿಕೆಯ ಬೆಲೆ
12 ಆಣೆ.

ಶ್ರೀಃ

ಶ್ರೀಮತೇ ರಾಮಾನುಜಾಯ ನಮಃ

ಶ್ರೀಮತೇ ಶಠಕೋಪಾಯ ನಮಃ

ಶ್ರೀ ಶಠಾರಿಮುನಿ ವಿರಚಿತವಾದ

# ತಿರುವಾಯ್ಮೊೞಿ

## (ತೃತೀಯ ಶತಕ)

---

ಶ್ರೀ ಕಲ್ಕಿಸಿಂಹ ಭಗವದ್ವಿರಚಿತ-ವ್ಯಾಖ್ಯಾನ-ಸಹಿತ.

ಶ್ರೀಮಾನ್ ಜಯತಿ ಕಲ್ಕೀನ್ದ್ರೋ ನಾರಸಿಂಹಃ ಪರಾತ್ಪರಃ ।
ಪರಿತ್ರಾಣಾಯ ಸಾಧೂನಾಂ ಕೃತಾವತರಣೋ ಹರಿಃ ॥

## ತೃತೀಯಶತಕದಲ್ಲಿ—ಪ್ರಥಮದಶಕ.

(ಮುಡಿಚ್ಚೋದಿಯಾಯ್—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಭಗವನ್ತನ ಸರ್ವಶೇಷಿತ್ವವನ್ನೂ ಚೇತನರ ಸ್ವಾಭಾವಿಕವಾದ ಶೇಷತ್ವವನ್ನೂ—ಶ್ರೀವನಗಿರಿಯ ಸುನ್ದರ ಬಾಹುಮೂರ್ತಿಯ ಸೌನ್ದರ್ಯಾದಿ ವರ್ಣನದ್ವಾರಾ—ನಿರೂಪಿಸುತ್ತಾರೆ.)

(೧) ಮುಡಿಚ್ಚೋದಿಯಾಯುನದು ಮುಕಚ್ಚೋದಿ
ಮಲರ್ನ್ದದುವೋ,
ಅಡಿಚ್ಚೋದಿ ನೀ ನಿನ್ಱ ತಾಮರೈಯಾಯ್ಯಲರ್ನ್ದದುವೋ,
ಪಡಿಚ್ಚೋದಿ ಯಾಡೈಯೊಡುಮ್ ಪಲ್‌ಕಲನಾಯ್,
ನಿನ್ ಪೈಮ್ಪೊನ್
ಕಡಿಚ್ಚೋದಿ ಕಲನ್ದದುವೋ, ತಿರುಮಾಲೇ ಕಟ್ಟುರೈಯೇ.

ಶ್ರೀ ಶಠಾರಿಮುನೇರ್ಗಾಥಾಸಹಸ್ರೇ ಪರಮಾತ್ಮನಃ ।
ಏಕಾನುಭವ ಏವಾಸ್ತಿ ತೃತೀಯೋ ಶತಕೇ ಸ್ಮೃತಃ ॥ ೧ ॥
ಶ್ರೀಮಾನ್ ಕಲ್ಕಿನೃಸಿಂಹಾರ್ಯಃ ಪ್ರತಿವಾದಿಭಯಙ್ಕರಃ ।
ತೃತೀಯಶತಕವ್ಯಾಖ್ಯಾಂ ಕುರ್ವೇ ಕರ್ಣಾಟಭಾಷಯಾ ॥ ೨ ॥

ಪ್ರ॥ **ಉನದು** – ನಿನ್ನ, ಮುಕಚ್ಚೋದಿ – ಮುಖದ ತೇಜಸ್ಸು, ಮುಡಿ-ಕಿರೀಟದ, ಶೋದಿಯಾಯ್ – ತೇಜಸ್ಸಾಗಿ, ಮಲರ್ನ್ದದುವೋ – ಮೇಲಕ್ಕೆ ಎದ್ದಿತೋ?, ಅಡಿಚ್ಚೋದಿ-ಪಾದಗಳ ತೇಜಸ್ಸು, ನೀ ನಿನ್ರ – ನೀನು ನಿಂತಿರುವ, ತಾಮರೈಯಾಯ್-ಪದ್ಮಾಸನವಾಗಿ, ಅಲರ್ನ್ದದುವೋ-(ಕೆಳಗೆ), ವಿಸ್ತರಿಸಿತೋ?, ಪೈಮ್ಪೊನ್-ವಿಸ್ತೀರ್ಣವಾದ ಸೌನ್ದರ್ಯವುಳ್ಳ, ನಿನ್-ನಿನ್ನ, ಕಡಿಚ್ಚೋದಿ-ಕಟಿಪ್ರದೇಶದ ತೇಜಸ್ಸು, ಪಡಿಚ್ಚೋದಿ-ಸ್ವಾಭಾವಿಕವಾದ ತೇಜಸ್ಸುಳ್ಳ, ಆಡೈಯೊಡುಮ್-ವಸ್ತ್ರಗಳೊಡನೆ, ಪಲ್ಕಲನಾಯ್ – ಅನೇಕ ದಿವ್ಯಾಭರಣಗಳೂ ಆಗಿ, ಕಲನ್ದದುವೋ-ಕೆಳಗೂ ಮೇಲೂ ಸೇರಿದೆಯೋ? ತಿರುಮಾಲೇ-ಶ್ರಿಯಃಪತಿಯೇ !, ಕಟ್ಟುರೈ –(ಇದನ್ನು) ಸಂಶಯವಿಲ್ಲದಂತೆ (ಕೃಪೆಯೊಡನೆ) ನಿರ್ಣಯಿಸಿ ಹೇಳು.

( ಸ· ಗಾ–ರ ॥ )—

**ಜ್ಯೋತಿಸ್ತೇ ಮುಖಮುಣ್ಣಲಸ್ಯ ಕಿಮಿದಂ ಮೌಳೀನ್ದ್ರತೇಜೋಮಯಂ ?**
**ಪಾದಾಬ್ಜಸ್ಯ ರುಚಿಃ ಕಿಮೇತದಭವತ್ಪದ್ಮಾಸನಂ ತೇ ಹರೇ ? ।**
**ರಮ್ಯಾ ತೇ ಕಟಿಕಾನ್ತಿರೇವ ಕಿಮಿಯಂ ವಸ್ತ್ರಾದಿಭೂಷಾತ್ಮಿಕಾ ?**
**ಶ್ರೀಶ ! ತ್ವಂ ಮಮ ಸಂಶಯಾನ್ ಪರಿಹರ ! ತ್ವಂ ವಾಚ್ಯವಾಚೀಪತಿಃ ॥**

ತಾ॥ (ಸುನ್ದರಬಾಹುಮೂರ್ತಿಯ ದಿವ್ಯಾವಯವಕಾನ್ತಿಗೂ ದಿವ್ಯಾಭರಣ ಕಾನ್ತಿಗೂ ಅನುರೂಪ್ಯವನ್ನು ವರ್ಣಿಸುತ್ತಾರೆ.) ನಿನ್ನ ಮುಖದ ಕಾನ್ತಿಯು ನಿನ್ನ ಕಿರೀಟದ ಕಾನ್ತಿಯಾಗಿ ಮೇಲಕ್ಕೆ ಎದ್ದಿದೆಯೋ ? ನಿನ್ನ ಪಾದಗಳ ಕಾನ್ತಿಯು ನಿನ್ನ ಪದ್ಮಾಸನವಾಗಿ ವಿಸ್ತರಿಸಿದೆಯೋ ? ನಿನ್ನ ಕಟಿಪ್ರದೇಶದ ಕಾನ್ತಿಯು ವಸ್ತ್ರಾಭರಣಗಳಾಗಿ ಪರಿಣಮಿಸಿದೆಯೋ ? ಎಲೈ ಶ್ರೀಧರನೇ ! ನಮ್ಮ ಈ ಸಂಶಯಗಳನ್ನು ನಿವಾರಣಮಾಡಿ ನೀನೇ ನಿರ್ಣಯಿಸಿ ಹೇಳು—(ಎಂದು ತಮ್ಮ ವಿಸ್ಮಯವನ್ನು ಸೂಚಿಸಿರುತ್ತಾರೆ.)

(೨) ಕಟ್ಟುರೈಕ್ಕಿಲ್ ತಾಮರೈ ನಿನ್ ಕಣ್ಪಾದಮ್ ಕೈಯೊವ್ವಾ,
ಶುಟ್ಟುರೈತ್ತ ನನ್ ಪೊನ್ನುನ್ ತಿರುಮೇನಿಯೊಳಿ ಯೊವ್ವಾದು,
ಒಟ್ಟುರೈತ್ತಿವ್ವುಲಕುನ್ನೈ ಪ್ಪುಕಳ್ವೆಲ್ಲಾಮ್ ಪೆರುಮ್ಪಾಲುಮ್,
ಪಟ್ಟುರೈಯಾಯ್ ಪ್ಪುತ್ತೇ ಕಾಟ್ಟುಮಾಲ್ ಪರಂಶೋದಿ.

ಪ್ರ|| ಪರಂಶೋದಿ-ಸರ್ವೋತ್ಕೃಷ್ಟವಾದ ತೇಜೋಮೂರ್ತಿಯೇ, ಶಟ್ಟು ಉರ್ೈಕ್ಕಿಲ್-ನಿರ್ಣಯಿಸಿ ಹೇಳಬೇಕಾದರೆ, ತಾಮರೈ-ತಾವರೆಪುಷ್ಪಗಳು, ನಿ-ನಿನ್ನ, ಕಣ್ಪಾದಮ್ಕೈ-ನೇತ್ರ ಪಾದ ಹಸ್ತಗಳಿಗೆ, ಒವ್ವಾ-ಸದೃಶವಾಗಲಾರವು. ಶುಟ್ಟು ಉರೈತ್ತ-ಬೆಂಕಿಯಲ್ಲಿ ಕರಗಿಸಿ ಶುದ್ಧಿಮಾಡಲ್ಪಟ್ಟ, ನಲ್ಪೊ-ಉತ್ತಮವಾದ ಬಂಗಾರವು, ಉಲ್ತಿರುಮೇನಿ-ನಿನ್ನ ದಿವ್ಯಮಂಗಳವಿಗ್ರಹದ (ಶರೀರದ), ಒಳಿ-ಕಾನ್ತಿಗೆ, ಒವ್ವಾದು-ಸಮಾನವಾಗಲಾರದು. ಇವ್ವುಲಕು-ಈ ಲೋಕವು, ಒಟ್ಟು ಉರೈತ್ತು-ಉಪಮಾನವನ್ನು ಹೇಳಿ, ಉನ್ನೈಪುಕಳ್ವು ಎಲ್ಲಾಮ್-ನಿನ್ನನ್ನು ಸ್ತೋತ್ರಮಾಡುವುದೆಲ್ಲಾ, ಪೆರುಮ್ಪಾಲುಮ್ - ಅತ್ಯಧಿಕವಾಗಿ (ಪ್ರಾಯೇಣ), ಪಟ್ಟು ಉರೈಯಾಯ್-ಮನಸ್ಸುಬಂದಂತೆ ಮಾತನಾಡಿದುದಾಗಿ, ಪುತ್ಕ್ಕೇ - ವಸ್ತುವಿಗೆ (ಉಪಮೇಯಕ್ಕೆ) ನ್ಯೂನತೆಯನ್ನೇ (ನಿಕರ್ಷವನ್ನೇ), ಕಾಟ್ಟುಮಾಲ್-ತೋರಿಸುವುದಷ್ಟೆ.

( ಸ-ಗಾ-ರ || )—

**ತತ್ತ್ವಂ ಚೇತ್ಪರಿಶೀಲ್ಯತೇ ತವ ಪರಂಜ್ಯೋತಿರ್ಮಯಸ್ಯಾಮ್ಬುಜಂ**
**ಚಕ್ಷುಃಪಾದಕರೈಸ್ಸಮಂ ನ ! ಕನಕಂ ಶುದ್ಧಂ ನ ತೇ ವರ್ಷ್ಮಣಾ |**
**ಔಪಮ್ಯಂ ಜಗತಾಽತ್ರ ಕಲ್ಪಿತಮಿದಂ ಸರ್ವಂ ಚ ಹೀನೋಪಮಾ**
**ಬಾಧಾತ್ಯೇವ ತವ ಸ್ತವೇಷು ಬಹುಶಸ್ಸತ್ಯಂ ನಿಕರ್ಷಾವಹಾ ||**

ತಾ || ಯಥಾರ್ಥವನ್ನು ಹೇಳಲಾರಂಭಿಸಿದರೆ—ಎಲೈ ದಿವ್ಯತೇಜೋಮೂರ್ತಿಯೇ ! ತಾವರೆಪುಷ್ಪಗಳು ನಿನ್ನ ನೇತ್ರ ಪಾದ ಹಸ್ತಗಳಿಗೆ ಸದೃಶವಾಗಲಾರವು ; ಶುದ್ಧಿಮಾಡಲ್ಪಟ್ಟ ಉತ್ತಮವಾದ ಬಂಗಾರವು ನಿನ್ನ ದಿವ್ಯಶರೀರದ ಕಾನ್ತಿಗೆ ಸಮಾನವಾಗಲಾರದು; ಆದುದರಿಂದ ಈ ಲೋಕದಲ್ಲಿ ಉಪಮಾನವನ್ನು ಹೇಳಿ ನಿನ್ನನ್ನು ಸ್ತೋತ್ರಮಾಡುವ ಪ್ರಯತ್ನವೆಲ್ಲಾ ಪ್ರಾಯೇಣ ಹೀನೋಪಮೆಯಾಗಿ ಉಪಮೇಯಕ್ಕೆ ನಿಕರ್ಷವನ್ನೇ ಉಂಟುಮಾಡಿದಂತೆ ಆಗುವುದು. (ಇದರಿಂದ ನಿನ್ನ ದಿವ್ಯಾವಯವ ಸೌನ್ದರ್ಯಾತಿಶಯವು ವರ್ಣಿಸಲಶಕ್ಯವಾದುದೆಂದು ತಾತ್ಪರ್ಯ.)

(೩) ಪರಂಶೋದಿ ನೀ ಪರಮಾಯ್, ನಿನ್ನಿಕಳ್ನ್ದು ಪಿನ್,
ಮಱ್ಱೋರ್
ಪರಂಶೋದಿ ಯಿನ್ಮೈಯಿಲ್, ಪಡಿಯೋವಿ ನಿಕಳ್ಕಿನ್ಱ,
ಪರಂಶೋದಿ ನಿನ್ನುಳ್ಳೇ, ಪಡರುಲಕಮ್ ಪಡೈತ್ತ, ಎಮ್
ಪರಂಶೋದಿ ಗೋವಿನ್ದಾ ಪಣ್ಬುರೈಕ್ಕಮಾಟ್ಟೇನೇ.

ಪ್ರ॥ ಪರಮಾಯ್–ಸರ್ವೋತ್ಕೃಷ್ಟನಾಗಿ, ಪರಂಜೋದಿ – ಪರಂಜ್ಯೋತಿಃ ಎಂಬ, ನೀ–ನೀನು, ನಿನ್ ಇಕನ್ದು–ನಿನ್ನನ್ನು ಬಿಟ್ಟು, ಪಿನ್ ಮಱ್ಱು ಓರ್–ಬೇರೆ ಮತ್ತೊಂದು, ಪರಂಜೋದಿ – ದಿವ್ಯತೇಜೋಮೂರ್ತಿಯು, ಇನ್ಮೈಯಿನ್–ಇಲ್ಲದೆ ಇರುವುದರಿಂದ, ಪಡಿ ಓವಿ ನಿಕೞ್ಕಿನ್ಱ–ಉಪಮಾನವಿಲ್ಲದೆ ಇರುವ, ಪರಂಜೋದಿ–ಪರಂಜ್ಯೋತಿಃ ಎಂಬ, ನಿನ್ನುಳ್ಳೇ–ನಿನ್ನ ಸಂಕಲ್ಪದೊಳಗೆ, ಪಡರ್–ವಿಸ್ತೀರ್ಣವಾದ, ಉಲಕಮ್–ಲೋಕವನ್ನು, ಪಡೈತ್ತ–ಸೃಷ್ಟಿಸಿದ, ಎಮ್ ಪರಂಜೋದಿ–ನಮ್ಮ ಪರಂಜ್ಯೋತಿಃ ಎಂಬ, ಗೋವಿನ್ದಾ–ಪಶುಪಾಲನಾದಿ ಮಹಾಗುಣಸಮ್ಪನ್ನನೇ, ಪಣ್ಬು–ನಿನ್ನ ದಿವ್ಯವಿಗ್ರಹಾದಿ ಮಹೋಜ್ಜ್ವಲಸ್ವಭಾವವನ್ನು, ಉರೈಕ್ಕ ಮಾಟ್ಟೇನ್–(ನಾನು) ವರ್ಣಿಸಲಾರೆನು.

( ಸ–ಗಾ–ರ || )—

**ಸರ್ವಸ್ಮಾತ್ಪರಮೋ ಭವಾನ್ ಹಿ ಭಗವಾನ್ ! ಜ್ಯೋತಿಃ ಪರಂ ತ್ವಂ ಹರೇ!**
**ನಾಸ್ತ್ಯೇವೋಜ್ಜ್ವಲಮನ್ಯದುತ್ತಮಗುಣಂ ಜ್ಯೋತಿರ್ವಿನಾ ತ್ವಾಂ ಕ್ವಚಿತ್|**
**ಸಙ್ಕಲ್ಪಾತ್ತವ ಸರ್ವಲೋಕಸರಣಿಂ ಸೃಷ್ಟ್ವಾತ್ರ ಸ್ವಯಂ ಭ್ರಾಜಸೇ !**
**ಗೋವಿನ್ದಾದ್ಯ ಪರಂ ಮಹಸ್ತವ ಗಿರಾ ವಕ್ತುಂ ನ ಶಕ್ತಿರ್ಮಮ ||**

ತಾ॥ ಸರ್ವೋತ್ಕೃಷ್ಟನಾಗಿರುವ ನೀನು "ಪರಂಜ್ಯೋತಿಃ" ಎಂಬ ನಾಮಧೇಯದಿಂದ ಪ್ರಸಿದ್ಧನಾಗಿರುತ್ತೀಯೆ. ನಿನ್ನನ್ನು ಬಿಟ್ಟು ಬೇರೆ ಯಾವ ದಿವ್ಯತೇಜೋಮೂರ್ತಿಯೂ ನಿನಗೆ ಸಮಾನವಾಗಿಲ್ಲದೆ ಇರುವುದರಿಂದ ಉಪಮಾನರಹಿತನಾಗಿ "ಪರಂಜ್ಯೋತಿಃ" ಎಂದು ಸಙ್ಕೀರ್ತಿತನಾಗಿರುತ್ತೀಯೆ. ನಿನ್ನ ಸಂಕಲ್ಪದಿಂದಲೇ ಸರ್ವಲೋಕಗಳನ್ನೂ ಸೃಷ್ಟಿಸಿದ ನೀನು ನಿರವಧಿಕ ತೇಜೋವಿಶಿಷ್ಟನಾಗಿರುತ್ತೀಯೆ. ನಿನ್ನ ಸೌಶೀಲ್ಯಾದಿ ಗುಣಗಳಿಂದ ಪಶುಪಾಲನಾದಿ ಕೃತ್ಯಗಳನ್ನು ಮಾಡಿದೆಯಲ್ಲವೇ? ಇಂತಹ ನಿನ್ನ ಮಹೋಜ್ಜ್ವಲಸ್ವಭಾವವನ್ನು ನಾನು (ವಾಚಾ) ವರ್ಣಿಸಲಾರೆನು.

(೪) ಮಾಟ್ಟಾದೇ ಯಾಕಿಲುಮಿಮ್ಮಲರ್ ತಲೈಮಾಞಾಲಮ್, ನಿನ್
ಮಾಟ್ಟಾಯ ಮಲರ್‌ಪುರೈಯುಮ್, ತಿರುವುರುವಮ್
ಮನಮ್ ವೈಕ್ಕ,
ಮಾಟ್ಟಾದ ಪಲಶಮಯ, ಮದಿಕೊಡುತ್ತಾಯ್ ಮಲರ್‌ತ್ತುೞಾಯ್,
ಮಾಟ್ಟೇ ನೀ ಮನಮ್ ವೈತ್ತಾಯ್, ಮಾಞಾಲಮ್ ವರುನ್ದಾದೇ.

ಪ್ರ॥ ಮಲರ್-ನಾಭಿಪದ್ಮವನ್ನು, ತಲೈ-ಶಿರಸ್ಸ್ಥಾನದಲ್ಲಿ ಉಳ್ಳ, ಇ ಮಾಞ್ಞಾಲಮ್-ಈ ಮಹಾಪ್ರಪಂಚವು, ನಿನ್ ಮಾಟ್ಟು ಆಯ-ನಿನ್ನ ಸ್ವರೂಪದಲ್ಲಿ ಸೇರಿರುವ, ಮಲರ್ಪುರೈಯುಮ್-ಪುಷ್ಪದಂತೆ ಸುಕುಮಾರವಾದ, ತಿರುವುರುವಮ್-ದಿವ್ಯಶರೀರವನ್ನು, ಮನಮ್-ಮನಸ್ಸಿನಲ್ಲಿ, ವೈಕ್ಕ-ಇಡುವುದಕ್ಕೆ, ಮಾಟ್ಟಾದೇಯಾಕಿಲುಮ್ - (ಅನಾದಿಕಾಲದಿಂದ) ಶಕ್ತಿಯಿಲ್ಲದೆ (ಸಮ್ಮತಿಸದೆ) ಇದ್ದರೂ, ಮಾಟ್ಟಾದ-ಅಯೋಗ್ಯವಾದ, ಪಲಶಮಯಮ್ ಮದಿ-ನಾನಾಮತಗಳಲ್ಲಿ ಬುದ್ಧಿಪ್ರವೃತ್ತಿಯನ್ನು, ಕೊಡುತ್ತಾಯ್-ನೀನು ಉಂಟುಮಾಡಿರುತ್ತೀಯೆ; ನೀ-ನೀನೇ, ಮಲರ್ತ್ತುೞಾಯ್ ಮಾಟ್ಟೇ - ವಿಕಸಿತವಾದ ತುಳಸೀದಳಗಳಲ್ಲಿ, ಮನಮ್ ವೈತ್ತಾಯ್ (ಪಾ॥ ವೈತ್ತಾಲ್)-ಮನಸ್ಸನ್ನು ಇಟ್ಟು ಭೋಗಪ್ರಸಕ್ತನಾದೆ (ಪ್ರಸಕ್ತನಾದರೆ), ಮಾಞ್ಞಾಲಮ್-ಈ ಮಹಾಲೋಕವು, ವರುನ್ದಾದೇ - ಕ್ಲೇಶಪಡುವುದಿಲ್ಲವೋ? (ಮನಮ್ ವೈತ್ತಾಲ್-ಎಂದೂ ಪಾಠಾನ್ತರ.)

( ಸ-ಗಾ-ರ ॥ )—

ವಿಶ್ವಂ ನಾಭಿಸರೋಜಮಸ್ತಕಮಿದಂ ಸತ್ಯಂ ವಿಶಾಲಂ ತವ
ಶ್ರೀಶಸ್ಯಾಮ್ಬುಜಕೋಮಲೇ ವಪುಷಿ ಯಚ್ಚಿತ್ತಂ ನ ಬಧ್ನಾತ್ಯಹೋ ! ।
ನಾನಾದುರ್ಮತಸಮ್ಪ್ರವಿಷ್ಟಮಪಿ ಯದ್ವಿಶ್ವಂ ತನೋಷಿ ಸ್ವಯಂ
ತಸ್ಮಾತ್ತಾತ್ತ್ವಂ ತುಲಸೀಪ್ರಿಯಂ ಕಥಮಿದಂ ವಿಶ್ವಂ ಸಮಾರಾಧಯೇತ್ ॥

ತಾ॥ ನಿನ್ನ ನಾಭಿಪದ್ಮದಿಂದ ಉದ್ಭೂತವಾದ ಪ್ರಪಂಚವೆಲ್ಲವೂ ನಿನ್ನ ಅತಿಕೋಮಲವಾದ ದಿವ್ಯಶರೀರವನ್ನು ಸ್ಮರಿಸಲಾರದೆ ಇದ್ದರೂ, ನಾನಾ ದುರ್ಮತಗಳಲ್ಲಿ ಬುದ್ಧಿಯು ಪ್ರವರ್ತಿಸುವಂತೆ ನೀನೇ ಮಾಡಿರುತ್ತೀಯೆ. ತುಳಸೀಪ್ರಿಯನಾದ ನೀನು ಭೋಗಪ್ರಸಕ್ತನಾದರೆ ಈ ಲೋಕವು ಕ್ಲೇಶಪಡುವುದಿಲ್ಲವೋ ? ( ನಿನ್ನ ಸೌನ್ದರ್ಯಾತಿಶಯವು ಅತ್ಯನ್ತ ಭೋಗ್ಯವಾಗಿರುವುದರಿಂದ ಈ ಅಜ್ಞವಾದ ಲೋಕವು ನಿನ್ನನ್ನು ಅನುಭವಿಸಲಾರದೆ ಕ್ಲೇಶಪಡುವುದೆಂದು ಅನುತಪಿಸುತ್ತಾರೆ.)

(೩೪) ವರುನ್ದಾದ ವರುನ್ದವತ್ತು ಮಲರ್ಕದಿರಿನ್ ಶುಡರುಡಮ್ಬಾಯ್,
ವರುನ್ದಾದ ಞಾನಮಾಯ್, ವರಮ್ಬಿನ್ಱಿ ಮುೞುದಿಯನ್ಱಾಯ್,
ವರುಙ್ಕಾಲಮ್ ನಿಗೞ್ಕಾಲಙ್ಕೞಿಕಾಲಮಾಯುಲಕೈ,
ಒರುಙ್ಗಾಗ ವಳಿಪ್ಪಾಯ್, ಶೀರೆಙ್ಗುಲಕ್ಕ ವೋದುವನೇ.

ಪ್ರ॥ ವರುನ್ದಾದ-ಪ್ರಯಾಸ ಸಾಧ್ಯವಲ್ಲದ (ಸ್ವಭಾವಸಿದ್ಧವಾದ), ಅರು-ಅತ್ಯನ್ತ ದುರ್ಲಭವಾದ, ತವತ್ತು-ತಪಃಫಲವೆಂಬಂತೆ, ಮಲರ್ಕದಿರಿನ್-ವಿಸ್ತೃತ

ವಾದ ಪ್ರಕಾಶವುಳ್ಳ, ಶುಡರ್-ತೇಜೋನಿಧಿರೂಪವನ್ನೇ, ಉಡಮ್ಬು ಆಯ್-ಮೂರ್ತಿಯಾಗಿ ಉಳ್ಳವನಾಗಿ, ವರುನ್ನಾದ-ಸ್ವಭಾವಸಿದ್ಧವಾದ, ಞಾನಮಾಯ್-ದಿವ್ಯಜ್ಞಾನವುಳ್ಳವನಾಗಿ, ವರಮ್ಬು ಇನ್ಱಿ-ಎಲ್ಲೆ ಇಲ್ಲದಂತೆ (ಅಪರಿಚ್ಛಿನ್ನವಾಗಿ), ಮುಱ್ಱುದು - ಸಕಲವಸ್ತುಗಳಲ್ಲಿಯೂ, ಇಯನ್ಱಾಯ್ - ವಾಸಮಾಡುವವನಾಗಿ, ವರುಮ್ ಕಾಲಮ್-ಭವಿಷ್ಯತ್ಕಾಲವೂ, ನಿಕೞ್ಕಾಲಮ್-ವರ್ತಮಾನಕಾಲವೂ, ಕೞಿಕಾಲಮ್-ಭೂತಕಾಲವೂ, ಆಯ್-ಆಗಿ, ಉಲಕ್ಕೈ-ಲೋಕಗಳನ್ನೆಲ್ಲಾ, ಒರುಙ್ಗು ಆಕ - ಏಕಪ್ರಕಾರವಾಗಿರುವಂತೆ, ಅಳಿಪ್ಪಾಯ್-ಸಂರಕ್ಷಿಸುವವನೇ !, ಶೀರ್-(ನಿನ್ನ) ಕಲ್ಯಾಣಗುಣಗಳನ್ನು, ಎಙ್ಙ-ಎಲ್ಲಿ (ಹೇಗೆ), ಉಲಕ್ಕ-ಪೂರ್ಣವಾಗಿ, ಓದುವನ್-ಹೇಳುವೆನು ? (ಹೇಳಲಾರೆನು).

( ಸ-ಗಾ-ರ ॥ )—

**ನೈಸರ್ಗಂ ಹಿ ತಪಃಫಲಂ ತ್ವಿತಿ ಮಹಜ್ಜ್ಯೋತಿಃ ಪರಂ ತೇ ತನು-**
**ಜ್ಞಾನಂ ಚಾಪಿ ನಿಸರ್ಗಸಿದ್ಧಮಪರಿಚ್ಛಿನ್ನಂ ವಿಭು ಶ್ರೀಹರೇ ! ।**
**ಲೋಕಾನ್ ಪಾಲಯಸಿ ಸ್ವಯಂ ಹಿ ಸತತಂ ಕಾಲತ್ರಯಸ್ಥೋಽಚ್ಯುತಃ**
**ಕಲ್ಯಾಣಾನಿಹ ತೇ ಗುಣಾನ್ ಕಥಮಹಂ ಕಾರ್ತ್ಸ್ನ್ಯೇನ ಸಙ್ಕೀರ್ತಯೇ? ॥**

ತಾ॥ ಸ್ವಭಾವಸಿದ್ಧವಾದ ತಪಃಫಲವೆಂಬಂತೆ ದಿವ್ಯತೇಜೋಮೂರ್ತಿಯಾಗಿಯೂ, ದಿವ್ಯಜ್ಞಾನನಿಧಿಯಾಗಿಯೂ, ಸಕಲವಸ್ತುಗಳಲ್ಲಿಯೂ ಅಪರಿಚ್ಛಿನ್ನವಾಗಿ ವ್ಯಾಪಿಸಿರುವವನಾಗಿಯೂ, ತ್ರಿಕಾಲಗಳಲ್ಲೂ ಸರ್ವಲೋಕ ಸಂರಕ್ಷಕನಾಗಿಯೂ ಇರುವ ನಿನ್ನ ಕಲ್ಯಾಣಗುಣಗಳನ್ನು ನಾನು ಹೇಗೆ ಪೂರ್ಣವಾಗಿ ವರ್ಣಿಸಬಲ್ಲೆನು ? (ನಿರವಧಿಕಮಹಿಮನಾದ ನಿನ್ನ ಗುಣಗಳನ್ನು ಯಾರುತಾನೇ ಸಂಪೂರ್ಣವಾಗಿ ವರ್ಣಿಸಬಲ್ಲರು? ದೇವತೆಗಳೂ ನಿತ್ಯಸೂರಿಗಳೂ ಕೂಡ ವರ್ಣಿಸಲಾರರೆಂದು ಭಾವವು.)

(೬) ಓದುವಾರೋತ್ತೆಲ್ಲಾ ಮೆವ್ವುಲಕತ್ತೆವ್ವೆವೈಯುಮ್,
ಶಾದುವಾಯ್ ನಿನ್ ಪುಕೞಿನ್, ತಕ್ಕೈಯಲ್ಲಾಲ್ ಪಿಱಿದಿಲ್ಲೈ,
ಪೋದುವಾೞ್ ಪುನನ್ತುೞಾಯ್ ಮುಡಿಯಿನಾಯ್, ಪೂವಿನ್ಮೇಲ್
ಮಾದುವಾೞ್ ಮಾರ್ಬಿನಾಯ್ಎನ್ ಶೊಲ್ಲಿ ಯಾನ್ ವಾೞ್ತ್ತುವನೇ.

ಪ್ರ॥ ಓದುವಾರ್-ವೇದಾಧ್ಯಯನಮಾಡುವವರ, ಓತ್ತೆಲ್ಲಾಮ್ - ವೇದಗಳೆಲ್ಲಾ, ಎವ್ವುಲಕತ್ತು-ಎಲ್ಲಾ ಲೋಕಗಳಲ್ಲೂ ಉಂಟಾದ, ಎವ್ವೆವೈಯುಮ್-ಎಲ್ಲಾ ಶಾಖೆಗಳನ್ನೂ ಪಡೆದು, ಶಾದುವಾಯ್-ಸತ್ಯಪ್ರಕಾಶರೂಪವಾದ ಸದ್ಧರ್ಮ

ವುಳ್ಳ, ನಿ ಪುಕ಴್ಗಿ – ನಿನ್ನ ಗುಣಗಳ, ತಕ್ಕ ಅಲ್ಲಾಲ್ – ಮಾಹಾತ್ಮ್ಯವನ್ನು ಹೊರತು, ಪಿತ್ತಿದು ಇಲ್ಲೈ–ಬೇರೆ ಯಾವುದರ ವಿಷಯದಲ್ಲೂ ಪ್ರವರ್ತಿಸಲಾರವು. ಪೋದು–ಪುಷ್ಪಗಳುಳ್ಳ, ಪುನವ್ ವಾಳ್ – ಉದ್ಯಾನಗಳಲ್ಲಿರುವ, ತುಳಾಯ್– ತುಳಸಿಯಿಂದ ಅಲಂಕೃತವಾದ, ಮುಡಿಯಿನಾಯ್–ಕಿರೀಟವುಳ್ಳವನೇ!, ಪೂವಿ ಮೇಲ್‌ಮಾದು–ಪದ್ಮದಮೇಲೆ ವಾಸಮಾಡುವ ಲಕ್ಷ್ಮೀದೇವಿಯು, ವಾಳ್–ನಿತ್ಯ ವಾಸಮಾಡುವ, ಮಾರ್ಬಿನಾಯ್–ವಕ್ಷಸ್ಥಲವುಳ್ಳವನೇ!, ಯಾ–ನಾನು, ಎ ಕೊಲ್ಲಿ – (ನಿನ್ನ)ಯಾವಯಾವ ಗುಣವನ್ನು ಹೇಳಿ, ವಾಳ್ತ್ತುವ – ಸ್ತೋತ್ರ ಮಾಡುವೆನು?

( ಸ–ಗಾ–ರ ॥ )—

**ವೇದಾ ವೇದವಿದಾಂ ಸಮಸ್ತಜಗತಾಂ ಸರ್ವೇ ವದನ್ತ್ಯಂಶತಃ**
**ಪೂರ್ಣಸ್ಯಾಪಿ ಗುಣಾಂಸ್ತ್ವವೈವ ತುಲಸೀಮಾಲಾಕಿರೀಟೋಜ್ಜ್ವಲ ।**
**ಪದ್ಮಾ ಚ ಸ್ವಯಮಸ್ತಿ ನಿತ್ಯವಸತಿರ್ವಕ್ಷಸ್ಸ್ಥಲೇ ತೇ ಹರೇ !**
**ಶಬ್ದೈಃ ಕೈಃ ಕಥಯಾಮ್ಯಹಂ ಕಥಮಹೋ ! ತಾದೃಕ್ಷ ತೇ ವೈಭವಮ್ ॥**

ತಾ॥ ವೈದಿಕರ ವೇದಗಳೆಲ್ಲವೂ ಸಂಪೂರ್ಣಮಹಿಮನಾದ ನಿನ್ನ ಗುಣಗಳನ್ನೇ ಅಂಶತಃ ಹೇಳುತ್ತಿರುವುವು. ದಿವ್ಯತುಳಸೀಮಾಲಾಲಂಕೃತ ಕಿರೀಟೋಜ್ಜ್ವಲ ನಾದ ನಿನ್ನ ವಕ್ಷಸ್ಸ್ಥಲದಲ್ಲಿ ಸಾಕ್ಷಾಲ್ಲಕ್ಷ್ಮೀದೇವಿಯು ನಿತ್ಯವಾಸಮಾಡುತ್ತಿದಾಳೆ. ಇಂಥಹ ಅಪರಿಚ್ಛಿನ್ನಮಹಿಮನಾದ ನಿನ್ನ ವೈಭವವನ್ನು ನಾನು ಯಾವ ಶಬ್ದ ಗಳಿಂದ ಸ್ತೋತ್ರಮಾಡಬಲ್ಲೆನು? (ಇದು ಸರ್ವರಿಗೂ ವಾಗತೀತವೆಂದು ಭಾವವು.)

(೨) ವಾೞ್ತ್ತುವಾರ್ ಪಲರಾಕ, ನಿನ್ನುಳ್ಳೇ ನಾನ್ಮುಕನ್ನೈ,
ಮೂೞ್ತ್ತ ನೀರುಲಕೆಲ್ಲಾಮ್ ಪಡೈಯೆನ್ರು ಮುದಲ್ ಪಡೈತ್ತಾಯ್,
ಕೇೞ್ತ್ತ ಶೀರರನ್ಮುದಲಾ ಕ್ಕಿಳರ್‌ದೆಯ್ವಮಾಯ್ ಕ್ಕಿಳರ್‌ನ್ದು,
ಶೂೞ್ತ್ತಮರರ್ ತುದಿತ್ತಾಲ್ ಉನ್ ತೊಲ್ ಪುಕೞ್ ಮಾಶೂಣಾದೇ.

ಪ್ರ॥ ವಾಳ್ತ್ತುವಾರ್–(ನಿನ್ನನ್ನು) ಸ್ತೋತ್ರಮಾಡುವವರು, ಪಲರ್ ಆಕ– ಅನೇಕರು ಉಂಟಾಗುವಂತೆ, ನಿನ್ನುಳ್ಳೇ–ನಿನ್ನ ಸಂಕಲ್ಪಸ್ವರೂಪದಲ್ಲಿ, ನಾನ್ಮು ಕನ್ನೈ – ಚತುರ್ಮುಖನನ್ನು, ಮೂಳ್ತ್ತ ನೀರ್ – (ಲೋಕಗಳನ್ನು) ಮುಳುಗಿಸಿದ (ಪೂರ್ಣವಾದ) ಪ್ರಳಯಾರ್ಣವದಲ್ಲಿ, ಉಲಕು ಎಲ್ಲಾಮ್–ಲೋಕಗಳನ್ನೆಲ್ಲಾ, ಪಡೈ ಎನ್ರು–ಸೃಷ್ಟಿಸು ಎಂದು, ಮುದಲ್– ಮೊದಲನೆಯವನಾಗಿ, ಪಡೈತ್ತಾಯ್– ಸೃಷ್ಟಿಸಿದವನೇ!, ಕೇಳ್ತ್ತ–ಪ್ರಕಾಶಿಸಿದ (ನಿಬಿಡವಾದ), ಶೀರ್–(ಜ್ಞಾನಾದಿ)

ಗುಣಗಳುಳ್ಳ, ಅರನ್ಮುದಲಾ-ರುದ್ರನೇ ಮೊದಲಾಗಿ, ಕಿಳರ್-ಉದ್ಭೂತ ದಿವ್ಯ ಶಕ್ತಿಯುಕ್ತರಾಗಿ, ಅಮರರ್-ಮರಣರಹಿತರಾದ, ದೆಯ್ವಮ್ ಆಯ್-ದೇವತೆಗಳಾಗಿ, ಕಿಳರ್ನ್ದು – ಉದ್ಯುಕ್ತರಾಗಿ, ಶೂೞ್ನ್ದು-(ಗುಣಗಳನ್ನೆಲ್ಲಾ) ಆವೃತ್ತಿ ಮಾಡಿ, ತುದಿತ್ತಾಲ್-ಸ್ತೋತ್ರಮಾಡಿದರೆ, ಉನ-ನಿನ್ನ, ತೊಲ್ – ಸ್ವಾಭಾವಿಕವಾದ, ಪುಕೞ್-ಗುಣೋತ್ಕರ್ಷವು, ಮಾಶು ಊಣಾದೋ – ಕಳಂಕಿತವಾಗುವುದಿಲ್ಲವೋ ?

( ಸ-ಗಾ-ರ || )—

**ಸ್ತೋತಾರೋ ಬಹವೋ ಭವನ್ತ್ವಿತಿ ಭವಾನಾದೌ ಸ್ವಯಂ ಸೃಷ್ಟವಾನ್**
**ಬ್ರಹ್ಮಾಣಂ ಚತುರಾನನಂ ಸೃಜ ಜಗನ್ತ್ಯಾಲೋದಕಾದಿತ್ಯಹೋ ! |**
**ರುದ್ರಾದ್ಯಾ ಅಮರಾಶ್ಚ ದಿವ್ಯಮತಯ ಸ್ಸಂಘೀಭವನ್ತ ಸ್ಸ್ವಯಂ**
**ಕಿಂ ಸ್ತೋತುಂ ಪ್ರಭವನ್ತಿ ಸದ್ಗುಣಗಣಾನ್ನಿತ್ಯೋಜ್ಜ್ವಲಾಂಸ್ತೇ ಹರೇ ! ||**

ತಾ|| ನಿನ್ನನ್ನು ಸ್ತೋತ್ರಮಾಡುವವರು ಅನೇಕರು ಉಂಟಾಗುವಂತೆ ಸಕಲ ಲೋಕ ಸೃಷ್ಟಿಯನ್ನು ಮಾಡುವುದಕ್ಕಾಗಿ ಚತುರ್ಮುಖನನ್ನು ನೀನೇ (ಪ್ರಳಯಾರ್ಣವದಲ್ಲಿ ಮಗ್ನವಾಗಿರುವ ಲೋಕಗಳನ್ನೆಲ್ಲಾ ಸೃಷ್ಟಿಸು—ಎಂದು) ಮೊದಲು ಸೃಷ್ಟಿಸಿದೆ ದಿವ್ಯಜ್ಞಾನವುಳ್ಳ ರುದ್ರಾದಿ ದೇವತೆಗಳೆಲ್ಲರೂ ಸೇರಿ ನಿನ್ನ ಗುಣಗಳನ್ನು ಸ್ತೋತ್ರಮಾಡಲು ಯತ್ನಿಸಿದರೆ ನಿನ್ನ ಗುಣೋತ್ಕರ್ಷಕ್ಕೆ ಕಳಂಕವೇ ಉಂಟಾಗುವುದಲ್ಲವೇ ? (ನಿನ್ನನ್ನು ಸ್ತೋತ್ರಮಾಡಲು ಯಾರೂ ಅರ್ಹರಲ್ಲವೆಂದು ಭಾವವು.)

**(೮) ಮಾಶೂಣಾಚ್ಚುಡರುಡಮ್ಬಾಯ್ ಮಲರಾದು ಕುವಿಯಾದು,**
**ಮಾಶೂಣಾ ಞಾನಮಾಯ್, ಮುೞುದುಮಾಯ್ ಮುೞುದಿಯನ್ಱಾಯ್,**
**ಮಾಶೂಣಾ ವಾನ್ಕೋಲತ್ತಮರರ್ಕೋನ್ ವೞಿಪ್ಪಟ್ಟಾಲ್,**
**ಮಾಶೂಣಾ ವುನಪಾದ ಮಲರ್ ಚ್ಚೋದಿ ಮೞುಙ್ಗಾದೇ.**

ಪ್ರ|| ಮಾಶು ಊಣಾ-ಕಳಂಕವನ್ನು ಹೊಂದದೆ ಇರುವ, ಶುಡರ್-ಪ್ರಕಾಶವುಳ್ಳ, ಉಡಮ್ಬು ಆಯ್-ಶರೀರವುಳ್ಳವನಾಗಿ, ಮಲರಾದು-ವಿಕಾಸರಹಿತವಾಗಿ, ಕುವಿಯಾದು – ಸಂಕೋಚರಹಿತವಾಗಿ, ಮಾಶು ಊಣಾ – ಕಳಂಕರಹಿತವಾದ, ಞಾನಮಾಯ್-ಜ್ಞಾನವನ್ನೇ ಸ್ವಭಾವವಾಗಿ ಉಳ್ಳವನಾಗಿ, ಮುೞುದುಮಾಯ್-ಸಮಸ್ತ ಗುಣವಿಭೂತಿವಿಶಿಷ್ಟನಾಗಿ, ಮುೞುದು-ಅವುಗಳೆಲ್ಲಾ, ಇಯನ್ಱಾಯ್-ನಿನ್ನ ಶಕ್ಯದಲ್ಲಿರುವಂತೆ ಸರ್ವಾಶ್ರಯಭೂತನಾದವನೇ !, ಮಾಶೂಣಾ-ಮಾಲಿನ

ರಹಿತವಾದ, ವಾ್ಕೋಲತ್ತು-ವಿಲಕ್ಷಣಜ್ಞಾನಾದಿ ಭೂಷಣಯುಕ್ತನಾದ, ಅಮರರ್ಕೋ-ದೇವತೆಗಳಿಗೆ ಅಧಿಪತಿಯಾದ ಬ್ರಹ್ಮನು, ವಳ್ತ್ತಲ್-ಸ್ತೋತ್ರ ಮಾಡಲು ಉದ್ಯುಕ್ತನಾದರೆ, ಮಾಶೂಣಾ - ನಿರ್ಮಲತಮವಾದ, ಉನಪಾದ ಮಲರ್-ನಿನ್ನ ಪಾದಾರವಿಂದಗಳ, ಶೋದಿ-ತೇಜಸ್ಸು, ಮ್ಯಾಜ್ಞಾದೇ-ಮಲಿನ ವಾಗುವುದಿಲ್ಲವೋ ? (ಕ್ಷೀಣವಾಗುವುದಿಲ್ಲವೋ ?)

( ಸ-ಗಾ-ರ ‖ )—

**ಶ್ರೀಕಾನ್ತಂ ನಿರವದ್ಯನಿರ್ಮಲಮಹಾತೇಜೋನಿಧಿಂ ತ್ವಾಂ ಹರಿಂ**
**ದಿವ್ಯಜ್ಞಾನನಿಧಿಂ ವಿಕಾರರಹಿತಂ ಸರ್ವಾಶ್ರಯಂ ಸರ್ವತಃ |**
**ದೇವೇಶೋಽಪಿ ಚತುರ್ಮುಖ ಶ್ಯಭಮತಿಸ್ತೋತುಂ ಚ ಸಜ್ಜೋ ಯದಿ**
**ತ್ವತ್ಪಾದಾಮ್ಬುಜಯುಗ್ಮಕಾನ್ತಿರತುಲಾ ಕಿಂ ನಾಪ್ನುಯಾನ್ಮ್ಲಾನತಾಮ್ ? ‖**

ತಾ‖ ನಿಷ್ಕಳಂಕವಾದ ದಿವ್ಯ ತೇಜೋಮೂರ್ತಿಯಾಗಿಯೂ, ಸಂಕೋಚ ವಿಕಾಸರಹಿತವಾದ ದಿವ್ಯಜ್ಞಾನನಿಧಿಯಾಗಿಯೂ, ಸಮಸ್ತ ಗುಣವಿಭೂತಿವಿಶಿಷ್ಟನಾಗಿ ಸರ್ವಾಶ್ರಯನಾಗಿಯೂ ಇರುವ ಸರ್ವೇಶ್ವರನೇ ! ನಿರ್ಮಲಜ್ಞಾನಾದಿ ಭೂಷಿತನಾದ ಚತುರ್ಮುಖಬ್ರಹ್ಮನು ಸ್ತೋತ್ರಮಾಡಲು ಉದ್ಯುಕ್ತನಾದರೂ, ನಿತ್ಯನಿರ್ಮಲವಾದ ನಿನ್ನ ಪಾದಾರವಿಂದಗಳ ದಿವ್ಯತೇಜಸ್ಸಿಗೆ ಮಾಲಿನ್ಯವುಂಟಾಗುವುದಿಲ್ಲವೇ? (ಆ ಬ್ರಹ್ಮನೂಕೂಡ ಸ್ತೋತ್ರಮಾಡಲು ಸುತರಾಂ ಅನರ್ಹನೆಂದು ಭಾವವು.)

(೯) ಮ್ಳುಬ್ಗಾದ ವೈನುದಿಯ ಶಕ್ಕರ ನಲ್ವಲತ್ತೈಯಾಯ್,
ತೊಳುಬ್ಗಾದಲ್ ಕಳಿಆಳಿಪ್ಪಾನ್ ಪುಳ್ಳೂರ್ನ್ದು ತೋನ್ರಿನೈಯೇ,
ಮಳುಪ್ಗಾದ ಞಾನಮೆ ಪಡೈಯಾಕ ಮಲರುಲಕಿಲ್,
ತೊಳುವಾರ್ಯಾರ್ಕ್ಕಳಿತ್ತಾಲ್ಲಾಲ್ ಶುಡರಚೋದಿ ಮಳ್ಳೈಯಾದೇ.

ಪ್ರ‖ ಮ್ಯಾಜ್ಞಾದ - ಮೊಂಡಾಗದ, ವೈ-ತೀಕ್ಷ್ಣಾಗ್ರವುಳ್ಳ, ನುದಿಯ-ಮುಖದೊಡನೆ ಕೂಡಿದ, ಶಕ್ಕರಮ್-ಚಕ್ರವನ್ನು, ನಲ್-ರಮ್ಯವಾದ, ವಲತ್ತೈಯಾಯ್-ಬಲಪಾರ್ಶ್ವದಲ್ಲಿ ಧರಿಸಿರುವವನಾಗಿ, ತೊಳುವ್-ಸೇವಾವೃತ್ತಿಯಲ್ಲಿ, ಕಾವಲ್-ಆಸೆಯುಳ್ಳ, ಕಳಿಱು - ಆನೆಯನ್ನು (ಗಜೇಂದ್ರನನ್ನು), ಅಳಿಪ್ಪಾನ್-ರಕ್ಷಿಸುವುದಕ್ಕೋಸ್ಕರ, ಪುಳ್ - ಗರುಡನನ್ನು, ಊರ್ನ್ದು-ತ್ವರೆಯಿಂದ ನಡೆಸಿ, ತೋನ್ರಿನೈಯೇ-ಪ್ರತ್ಯಕ್ಷವಾಗಿ ನಿಂತೆಯಲ್ಲವೇ ? (ಹೀಗಿರುವಲ್ಲಿ) ಮ್ಯಾಜ್ಞಾದ-

ಅಮೋಘವಾದ, ಞಾನಮೇ-ಜ್ಞಾನವೇ (ಸಂಕಲ್ಪವೇ), ಪಡೈಯಾಕ-ಸಾಧನವಾಗಿ, ಮಲರ್-ವಿಸ್ತೃತವಾದ, ಉಲಕಿಲ್-ಲೋಕದಲ್ಲಿ, ತೋಱುಮ್ ಆಯಾರ್ಕ್ಕುಮ್-(ನಿನ್ನ) ಭಕ್ತರಾದವರಿಗೆ, ಅಳಿತ್ತಾಲ್ - ಉಪಕಾರವನ್ನಾಡಿದರೆ, ಉನ-ನಿನ್ನ, ಶುಡರ್ ಶೋದಿ-ಅತ್ಯುಜ್ಜ್ವಲವಾದ ತೇಜಸ್ಸು, ಮತ್ತ್ರಯಾದೇ-ತಿರಸ್ಕೃತವಾಗುವುದಿಲ್ಲವೋ? (ಆರ್ತರಕ್ಷಣಕ್ಕಾಗಿ ನೀನು ಮಡುವಿನಬಳಿಗೆ ಇಳಿದುಬಂದರೆ ನಿನ್ನ ತೇಜಸ್ಸು ಕ್ಷೀಣವಾಗುವುದಿಲ್ಲವೋ?)

( ಸ-ಗಾ-ರ || )—

**ನಿತ್ಯಾಮೋಘಸುತೀಕ್ಷ್ಣಚಕ್ರಧರ ! ತೇ ಕೈಙ್ಕರ್ಯಸಕ್ತಂ ಗಜಂ**
**ತ್ರಾತುಂ ತ್ವಂ ಗರುಡಂ ತ್ವರಾತಿಶಯತೋಽಽರೂಢಸ್ಸ್ವಯಂ ಚಾಗತಃ |**
**ಸಙ್ಕಲ್ಪೈಸ್ಸ್ವಫಲೈಸ್ತ್ವಮತ್ರ ಜಗತಾಂ ರಕ್ಷಾಸು ದೀಕ್ಷ್ಯಾಸ್ತಿ ಚೇತ್**
**ಕಿಂ ಜ್ಯೋತಿರ್ನ ತಿರಸ್ಕೃತಂ ಭವತಿ ತೇ ವಾತ್ಸಲ್ಯಸೀಮಾಮ್ಬುಧೇಃ ? ||**

ತಾ|| ಸುತೀಕ್ಷ್ಣಾಗ್ರವುಳ್ಳ ಚಕ್ರಾಯುಧವನ್ನು ಬಲಗೈಯಿಂದ ಧರಿಸಿ ನಿನ್ನ ಭಕ್ತಾಗ್ರೇಸರನಾದ ಗಜೇಂದ್ರನನ್ನು ರಕ್ಷಿಸುವುದಕ್ಕೋಸ್ಕರ ಅತಿ ತ್ವರೆಯೊಡನೆ ಗರುಡನನ್ನು ನಡೆಸಿ ಆ ಮಡುವಿನ ಸಮೀಪದಲ್ಲಿ ನಿಂತೆಯಲ್ಲವೇ! ಹೀಗೆ ನೀನು ಭಕ್ತರಿಗೋಸ್ಕರ (ನಿನ್ನ ಅಪಾರವಾದ ಮಹಿಮೆಯನ್ನೂ ಮರೆತು) ಈ ಲೋಕಕ್ಕೆ ಬಂದು ಅತ್ಯಂತ ಸುಲಭನಾಗಿ ಪ್ರತ್ಯಕ್ಷದೃಶ್ಯನಾದರೆ ನಿನ್ನ ಅತ್ಯುಜ್ಜ್ವಲವಾದ ತೇಜಸ್ಸಿಗೆ ತಿರಸ್ಕಾರವುಂಟಾಗುವುದಿಲ್ಲವೋ? (ಪರಾತ್ಪರನಾದ ನಿನಗೆ ಇಂತಹ ಸೌಲಭ್ಯವು ತಕ್ಕುದಲ್ಲವೆಂದು ಭಾವವು.)

(೧೦) ಮತ್ತ್ರಯಾಯ ನಾಲ್ವೇದತ್ತುಳ್ ನಿನ್ರ ಮಲರ್ ಚ್ಚುಡರೇ,
ಮುತ್ತ್ರಯಾಲಿವ್ವುಲಕೆಲ್ಲಾಮ್ ಪಡೈತ್ತಿಡನ್ದುಣ್ಡುಮಿೞ್-
ನ್ದಳನ್ದಾಯ್,
ಪಿತ್ತ್ರಯೆೞು ಶಡೈಯಾನುಮ್, ನಾನ್ಮುಕನುಮಿನ್ದಿರನುಮ್,
ಇತ್ತ್ರಯಾವಲಱಿನ್ದೇತ್ತ ಪ್ಪೀಱ್ಱಿರುತ್ತಲಿದು ವಿಯಪ್ಪೇ.

ಪ್ರ|| ಮತ್ತ್ರಯಾಯ-ರಾಜಸ ತಾಮಸರಿಗೆ ತಮ್ಮ ಅರ್ಥಗಳನ್ನು ಮರೆಸುವ, ನಾಲ್ವೇದತ್ತು ಉಳ್ ನಿನ್ರ- ನಾಲ್ಕು ವೇದಗಳ ಅನ್ತರಂಗತಾತ್ಪರ್ಯಭೂತವಾಗಿ ನಿಂತಿರುವ, ಮಲರ್ ಶುಡರೇ-ವಿಕಾಸವುಳ್ಳ ಜ್ಯೋತೀರೂಪನೇ! ಮುತ್ತ್ರಯಾಲ್-ಪರ್ಯಾಯದಿಂದ, ಇವ್ವುಲಕು ಎಲ್ಲಾಮ್ - ಈ ಲೋಕಗಳನ್ನೆಲ್ಲಾ, ಪಡೈತ್ತು-

ಸೃಷ್ಟಿಸಿ, ಇಡನ್ದು-(ಪ್ರಳಯದಲ್ಲಿ ಮುಳುಗಿದ್ದ ಪ್ರಪಂಚವನ್ನು) ಮೇಲಕ್ಕೆ ಎತ್ತಿ, ಉಣ್ಡು-(ಮಹಾಪ್ರಳಯದಲ್ಲಿ) ಭಕ್ಷಿಸಿ, ಉಮಿೞ್ನ್ದು-(ಪುನಃ ಈಚೆಗೆ) ಉಗಿದು (ಉದ್ಭವಿಸುವಂತೆ ಮಾಡಿ), ಅಳನ್ದಾಯ್-ಅಳೆದವನೇ!, ಇತ್ತ್ಯಾದಲ್-ಸರ್ವಶೇಷಿಯೆಂದು, ಅಱಿನ್ದು-(ನಿನ್ನನ್ನು) ತಿಳಿದು, ಪಿಱೈಯೇಱು-ಚನ್ದ್ರಕಲಾಧಾರಿಯಾದ, ಶಡೈಯಾನುಮ್-ಜಟಾಧರನಾದ ರುದ್ರನೂ, ನಾನ್ಮುಕನುಮ್-ಚತುರ್ಮುಖನೂ, ಇನ್ದಿರನುಮ್-ಇನ್ದ್ರನೂ, ಏತ್ತ-ಸ್ತೋತ್ರಮಾಡಿ ಆಶ್ರಯಿಸುವಂತೆ, ನೀಱ್ಱಿರುತ್ತಲ್ ಇದು - ಪೃಥಕ್‌ಸ್ಥಿತಿಯುಳ್ಳ ನಿನ್ನ ಈ ಸ್ಥಿತಿಯು, ವಿಯಪ್ಪೇ-ಆಶ್ಚರ್ಯವೋ ?

( ಶ-ಗಾ-ರ ॥ )—

**ಗೂಢಾ ವೇದಚತುಷ್ಟಯೇಽತಿಗಹನೇ ಜ್ಯೋತಿಃ ಪರಂ ತ್ವಂ ಹರೇ !**
**ಪರ್ಯಾಯೇಣ ಜಗತ್ತ್ವಮೇವ ಸಕಲಂ ಸೃಷ್ಟ್ವಾ ಸ್ವಯಂ ಭಕ್ಷಯನ್ ।**
**ಉದ್ಗೀರ್ಯಾಪಿ ಪುನಃ ಪದಕ್ರಮತ ಏವೋನ್ಮಾತುಮಾಸೀಃ ಪ್ರಭುಃ !**
**ಕಿಂ ಚಿತ್ರಂ ಯದಿ ಸೇವ್ಯಸೇ ತ್ವಮನಿಶಂ ರುದ್ರೇನ್ದ್ರಧಾತ್ರಾದಿಭಿಃ ? ॥**

ತಾ॥ ವೇದಚತುಷ್ಟಯದಲ್ಲಿಯೂ ಅನ್ತರಂಗತಾತ್ಪರ್ಯಭೂತನಾಗಿ ಗುಪ್ತನಾಗಿರುವ ದಿವ್ಯತೇಜೋರೂಪನೇ! ಈ ಲೋಕಗಳನ್ನೆಲ್ಲಾ ನೀನೇ ಪರ್ಯಾಯಕ್ರಮದಿಂದ (ಆಯಾ ಅವತಾರಗಳಲ್ಲಿ) ಸೃಷ್ಟಿಸಿ, ಮೇಲಕ್ಕೆತ್ತಿ, ಭಕ್ಷಿಸಿ, ಪುನಃ ಉಗಿದು (ಉದ್ಭವಿಸುವಂತೆ ಮಾಡಿ), ಅಳೆದು ರಕ್ಷಿಸಿದೆಯಲ್ಲವೇ! ಇಂತಹ ನಿನ್ನನು ಚನ್ದ್ರಮೌಳಿಯಾದ ರುದ್ರನೂ, ಚತುರ್ಮುಖನೂ ಕೂಡ ಸ್ತೋತ್ರಮಾಡುವಂತೆ ನೀನು ಪೃಥಕ್‌ಸ್ಥಿತಿಯುಳ್ಳವನಾಗಿ (ಸರ್ವದೇವಾಧಿದೇವನಾಗಿ) ಪರಾತ್ಪರನಾಗಿರೋಣವು ಒಂದು ಆಶ್ಚರ್ಯವೋ ? (ಇದು ಆಶ್ಚರ್ಯವೇ ಅಲ್ಲವೆಂದು ಭಾವವು.)

(೧೧) ವಿಯಪ್ಪಾಯ ವಿಯಪ್ಪಿಲ್ಲಾ ಮೆಯ್ಙ್ಞಾನ ವೇದಿಯನ್ಯೆ,
ಶಯಪ್ಪುಕಳಾಲ್ ಪಲರ್ ವೀೞವ್ವ್, ತಡಙ್ಗುಕೞರ್
ಶೆಡಕೋಪನ್,
ತುಯಕ್ಕಿನ್ಱಿ ತೊೞುದುರೈತ್ತ ವಾಯಿರತ್ತುಳಿಪ್ಪತ್ತುಮ್,
ಉಯಕ್ಕೊಣ್ಡು ಪಿಱಪ್ಪಱುಕ್ಕುಮ್ ಒೞಿವಿಲ್ಲಾನೀರ್ ಙಾಲತ್ತೇ.

ಪ್ರ॥ ವಿಯಪ್ಪು ಆಯ-(ಇತರರ) ಆಶ್ಚರ್ಯಕರವಾದ ಗುಣಚೇಷ್ಟಿತಗಳು, ವಿಯಪ್ಪಿಲ್ಲಾ-(ತನ್ನ ವಿಷಯದಲ್ಲಿ) ಆಶ್ಚರ್ಯಕರವಲ್ಲದೆ ಅವುಗಳೂ ತನ್ನಿಂದಲೇ

ಪ್ರಕಾಶಿಸುವಂತೆ ಇರುವ, ಮೆಯ್ ಞಾನಮ್– ಈ ಯಾಥಾತ್ಮ್ಯಜ್ಞಾನವನ್ನು ಪ್ರತಿಪಾದಿಸುವ, ವೇದಿಯನ್ನೈ–ವೇದಗಳಿಗೆ ವೇದ್ಯನಾದವನನ್ನು, ಶಯಙ್ಗ್–ಸಂಸಾರವನ್ನು ಜಯಿಸುವುದರಿಂದ ಉಂಟಾದ, ಪುಕರ್ ಉಡೈಯಾರ್ – ಜ್ಞಾನವೈರಾಗ್ಯ ಭೂಷಿತರಾದವರು, ಪಲರ್–ಅನೇಕರು, ವಾೞುಮ್–ಬಾಳುವ, ತಡಮ್–ವಿಶಾಲವಾದ, ಕುರುಕೂರ್ ಶಡಕೋಪನ್–ಕುರುಕಾಪುರಿಗೆ ನಿರ್ವಾಹಕರಾದ ಶ್ರೀ ಶಠಾರಿಯು, ತುಯಕ್ಕು ಇನ್ಱಿ–ಸಂಶಯವಿಪರ್ಯಯಾದಿ ಮನೋವೈಕಲ್ಯವು ಇಲ್ಲದಂತೆ, ತೊೞುದು –ಭಜಿಸಿ, ಉರೈತ್ತ–ಹೇಳಿದ, ಆಯಿರತ್ತುಳ್–ಸಹಸ್ರಪದ್ಯಮಾಲೆಯೊಳು, ಇಪ್ಪತ್ತುಮ್– ಈ ದಶಕವು, ಒಲಿಪುನೀರ್–ಉದ್ಘೋಷಿಸುವ ಸಮುದ್ರದಿಂದ ಪರಿವೃತವಾದ, ಞಾಲತ್ತು–ಭೂಮಿಯಲ್ಲಿ, ಉಯಕ್ಕೊಣ್ಡು–ಉಜ್ಜೀವಿಸುವಂತೆ ಮಾಡಿ, ಪಿಱಪ್ಪು ಅಱುಕ್ಕುಮ್–ಜನ್ಮಸಮ್ಬನ್ಧವನ್ನು ಛೇದಿಸುವುದು.

( ಸ–ಗಾ– ರ ॥ )—

ಚಿತ್ರಾಣಾಮಪಿ ಚಿತ್ರಮೇವ ವಿಶದಜ್ಞಾನೈಕವೇದ್ಯಂ ಹರಿಂ
ನತ್ವಾ ಶ್ರೀಕುರುಕಾಪುರೇ ಶಠರಿಪುಸ್ತು ಜ್ಞಾವ ಜಿಷ್ಣ್ವಾತ್ಮನಾಶ್ರಯೇ ।
ಸಾಹಸ್ರೇ ದಶಕಂ ತದೇತದಪಿ ಚೋದ್ಘುಷ್ಟಂ ಸಮುದ್ರಾವೃತೇ
ಚಾಸ್ಮಿನ್ ಭೂಮಿತಲೇ ಸಮುದ್ಧೃತಿಕರಂ ಬಾಭಾತಿ ಜನ್ಮಾಪಹಮ್ ॥

ತಾ॥ ಸರ್ವವಿಧವಾದ ಆಶ್ಚರ್ಯಗಳಿಗೂ ಆಶ್ಚರ್ಯಕರನಾದ ದಿವ್ಯಜ್ಞಾನೈಕವೇದ್ಯನಾದ ಸರ್ವೇಶ್ವರನನ್ನು, ಜ್ಞಾನವೈರಾಗ್ಯಾದಿ ಭೂಷಿತರಾದ ಮಹಾತ್ಮರಿಂದ ಅಲಂಕೃತವಾದ ಕುರುಕಾಪುರಿಗೆ ನಿರ್ವಾಹಕರಾದ ಶ್ರೀ ಶಠಾರಿಮುನಿವರ್ಯರು ಸಂಶಯವಿಪರ್ಯಯಾದಿ ಮನೋವೈಕಲ್ಯವಿಲ್ಲದಂತೆ ಭಜಿಸಿ ಸ್ತೋತ್ರಮಾಡಲು ರಚಿಸಿದ ಸಹಸ್ರಪದ್ಯಮಾಲೆಯೊಳು ಈ ದಶಕವು ಪಠನಮಾಡುವ ಸಕಲ ಚೇತನರನ್ನೂ ಉಜ್ಜೀವಿಸುವಂತೆ ಮಾಡಿ ಅವರ ಜನ್ಮಪಾಶವನ್ನು ಛೇದಿಸುವುದೆಂದು ತಾತ್ಪರ್ಯ.

( ದ್ರ–ಉ–ಸಂ ॥ )—

ಆದ್ಯೇ ತೃತೀಯಶತಕಸ್ಯ ವನಾದ್ರಿಭರ್ತು–
ರಾಪಾದಮೌಳ್ಯವಯವಾಭರಣಾಭಿರೂಪ್ಯಮ್ ।
ಬ್ರಹ್ಮಾದಿವಾಗವಿಷಯಂ ಚ ಮಹಾಪ್ರಭಾವಂ
ಸೌನ್ದರ್ಯಮಗ್ನಹೃದಯಶ್ಶಠಜಿಚ್ಛಶಂಸ ॥

( ದ್ರ–ಉ–ತಾ–ರ || )—

ಸುಸ್ನಿಗ್ಧಾಸ್ವಕಲ್ಪಮಜ್ಞೈರನುಪಮಸುಷುಮಂ ವಕ್ತ್ರ ನಿಸ್ಸೀಮದೀಪ್ತಂ
ಸ್ವಾನ್ತಸ್ಸ್ವಾದುಸ್ಸ್ವದೇಹಂ ಸುಖಭಜನಪದಂ ವ್ಯಞ್ಜಿತಾಙ್ಗಂ ಮಹಿಷ್ಯಾ |
ಸ್ತೋತ್ರಾತಿಕ್ರಾನ್ತಕೀರ್ತಿಂ ಮಲಿನಿಮರಹಿತೌಜ್ಜ್ವಲ್ಯಮಿಷ್ಟಾಪ್ತವಾಕ್ಯಂ
ವೀತಾಶ್ಚರ್ಯತ್ರಿಣೇತ್ರಪ್ರಭೃತಿಸುರನುತಿಂ ಚಿತ್ರಸೌನ್ದರ್ಯವಿದ್ಧಮ್ ||

(ಈ ಪ್ರಥಮದಶಕದ ಸಾರಾಂಶ.)

ಈ ಮೊದಲನೆಯ ದಶಕದಲ್ಲಿ - ಶ್ರೀ ಶಠಾರಿಮುನಿವರ್ಯರು ವನಗಿರೀಶ್ವರನಾದ ಸುನ್ದರಬಾಹು (ಅೞಕರ್) ಮೂರ್ತಿಯ ದಿವ್ಯಸೌನ್ದರ್ಯ ದಿವ್ಯಾಭರಣಕಾನ್ತ್ಯಾದಿಗಳನ್ನು ಆಪಾದಮಸ್ತಕವಾಗಿ ವರ್ಣಿಸಿ, ಸರ್ವಲೋಕ ಸೃಷ್ಟಿ ಸ್ಥಿತಿ ಲಯ ಕಾರಣಭೂತನಾಗಿ ಸರ್ವದೇವಾಧಿದೇವನಾದ ಈ ಭಗವನ್ತನ ಅಪಾರವಾದ ಮಹಿಮೆಯನ್ನು ಬ್ರಹ್ಮರುದ್ರೇನ್ದ್ರಾದಿಗಳೂ ಕೂಡ ವರ್ಣಿಸಲು ಅನರ್ಹರೆಂದು ಹೇಳಿ (ಸೌನ್ದರ್ಯಾತಿಶಯದಲ್ಲಿ ಮಗ್ನಹೃದಯರಾಗಿ) ವಾಚಾ ವರ್ಣಿಸಲು ನಾನು ಹೇಗೆ ಶಕ್ತನೆಂದು ನಿವೃತ್ತರಾಗಿರುತ್ತಾರೆ.

—:o:—

## ಶ್ರೀಃ

## ತೃತೀಯಶತಕದಲ್ಲಿ—ದ್ವಿತೀಯದಶಕ.

(ಮುನ್ನೀರ್ ಞಾಲಂಪಡೈತ್ತ—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ತಮ್ಮ ಕರಣಸಂಕೋಚದಿಂದ ಭಗವದನುಭವಯೋಗ್ಯತೆಯು ಇಲ್ಲವೆಂದು ವ್ಯಾಮೋಹವಶ್ಯರಾಗಿರಲು ಶ್ರೀ ಶೇಷಗಿರಿಯಲ್ಲಿ ತಾನು ಸರ್ವಸುಲಭನಾಗಿ ನಿಂತಿರುವುದನ್ನು ಭಗವನ್ತನು ತಿಳಿಸಿ ಸಮಾಧಾನಪಡಿಸಿದನೆಂದು ವರ್ಣಿಸಲ್ಪಟ್ಟಿದೆ.)

---

(೧) ಮುನ್ನೀರ್ ಞಾಲಂ ಪಡೈತ್ತ ಎಮ್ಮುಕಿಲ್ ವಣ್ಣನೇ,
ಅನ್ನಾಳ್ ನೀ ತನ್ದವಾಕ್ಕೈಯಿನ್ ವೞಿಯುೞಲ್ವೇನ್,
ವೆನ್ನಾಳ್ ನೋಯ್ ವೀಯವಿನೈಕಳೈ ವೇರಱಪ್ಪಾಯ್ನ್ದು,
ಎನ್ನಾಳ್ ಯಾನುನ್ನೈ ಯಿನಿವನ್ದು ಕೂಡುವನೇ.

ಪ್ರ॥ ಮುನ್ನೀರ್–ಮೂರುವಿಧವಾದ ನೀರುಳ್ಳ, ಞಾಲಮ್–ಲೋಕವನ್ನು, ಪಡೈತ್ತ–ಸೃಷ್ಟಿಸಿದ, ಎಮ್ ಮುಕಿಲ್ ವಣ್ಣನೇ–ನಮ್ಮ (ನೀಲ) ಮೇಘವರ್ಣನೇ! ಅನ್ನಾಳ್–ಆ ಸೃಷ್ಟಿಕಾಲದಲ್ಲಿ, ನೀ ತನ್ದ–ನೀನು ನಮಗೆ (ನಿನ್ನನ್ನು ಹೊಂದಲು) ಕೊಟ್ಟ, ಆಕ್ಕೈಯಿನ್–ಶರೀರದ, ವಳಿ–ಬನ್ಧಕಮಾರ್ಗದಲ್ಲಿ ಹೋಗಿ, ಉೞಲ್ವೇನ್–ಗರ್ಭನರಕಾದಿಗಳಲ್ಲಿ ಪ್ರವೇಶಿಸಿ ಸನ್ತಪ್ತನಾದ ನಾನು, ವೆಮ್ನಾಳ್–(ಜ್ಞಾನವು ಹುಟ್ಟಿದಮೇಲೆ) ಪರಿತಾಪಜನಕವಾದ ಕಾಲದಲ್ಲಿ ನೋಯ್–(ಅಹಂಕಾರಾರ್ಥ ಕಾಮಾದಿರೂಪವಾದ) ವ್ಯಾಧಿಗಳು, ವೀಯ – ನಾಶಹೊಂದುವಂತೆ, ವಿನೈಕಳೈ–(ಅವುಗಳಿಗೆ ಕಾರಣವಾದ) ಕರ್ಮಗಳನ್ನು, ವೇರ್ ಅಱ–ಮೂಲನಾಶವಾಗುವಂತೆ, ಪಾಯ್ನ್ದು–ಕಿತ್ತುಹಾಕಿ, ಯಾನ್–ನಾನು, ಉನ್ನೈ–ನಿನ್ನನ್ನು, ಇನಿ–ಇನ್ನುಮೇಲೆ, ವನ್ದು–ಬನ್ದು, ಎನ್ನಾಳ್–ಯಾವಕಾಲದಲ್ಲಿ, ಕೂಡುವನ್–ಸೇರುವೆನು ?

( ಸ–ಗಾ–ರ ॥ )—

**ಲೋಕಂ ಚ ತ್ರಿವಿಧಾಮ್ಬುಸಂಶ್ರಯಮಿಮಂ ಸೃಷ್ಟ್ವಾಽಪಿ ಕರ್ತಾಽಸಿ ನಃ**
**ಕಾರುಣ್ಯಾಚ್ಚ ಪಯೋದವರ್ಣ ! ಯದಹಂ ತ್ವದ್ದತ್ತಕಾಯಾನುಗಃ |**
**ಸನ್ತಪ್ತೋಽಸ್ಮಿ ಮಹಾರ್ತಿಪಾಪಸರಣಿಂ ಹತ್ವಾ ಸಮೂಲಾಮಿಮಾಂ**
**ತ್ವಾಂ ಸಂಪ್ರಾಪ್ಯ ಕದಾ ಭವಾಮಿ ಭಗವನ್ ! ಧನ್ಯೋ ನ ವೇದ್ಮಿ ಸ್ವಯಮ್ ||**

ತಾ॥ ಸಕಲ ಲೋಕಸೃಷ್ಟಿಯಂ ಮಾಡಿದ ನೀಲಮೇಘಶ್ಯಾಮನೇ ! ನಿನ್ನನ್ನೇ ಹೊಂದುವುದಕ್ಕಾಗಿ ನೀನು ಕೊಟ್ಟಿರುವ ಶರೀರದ ಬನ್ಧಕಮಾರ್ಗದಲ್ಲಿ ಹೋಗಿ ಸನ್ತಪ್ತನಾದ ನಾನು ಸಕಲ ಸನ್ತಾಪಮೂಲವಾದ ಕರ್ಮಗಳನ್ನು ಸಮೂಲವಾಗಿ ನಾಶಪಡಿಸಿ ನಿನ್ನನ್ನೇ ಸೇರುವಕಾಲವು ಎಂದಿಗೆ ಬರುವುದೋ ?— ಎಂದು ಭಗವತ್ಪ್ರಾಪ್ತಿಕಾಲವಂ ನಿರೀಕ್ಷಿಸುತ್ತಾರೆ.

(೨) ವನ್ಮಾ ವೈಯಮಳನ್ದ ವೆಮ್ ವಾಮನಾ, ನಿನ್
ಪನ್ಮಾ ಮಾಯಪ್ಪಲ್ ಪಿಱವಿಯಿಲ್ ಪಡಿಕಿನ್ಱ ಯಾನ್,
ತೊನ್ಮಾ ವಲ್ವಿನೈತ್ ತೊಡರ್ಕಳೈ ಮುದಲರಿನ್ದು,
ನಿನ್ಮಾ ತಾಳ್ ಶೇರ್ನ್ದು ನಿಱ್ಪದೆಞ್ಞಾನ್ಱುಕೊಲೋ.

ಪ್ರ॥ ವಲ್–ಕಾಠಿನ್ಯದಿಂದ ಬಲಿಷ್ಠವಾದ, ಮಾ–ವಿಶಾಲವಾದ, ವೈಯಮ್–ಭೂಮಿಯನ್ನು, ಅಳನ್ದ–ಅಳೆದ, ಎಮ್ ವಾಮನಾ–ನಮ್ಮ ವಾಮನನೇ, ನಿನ್–

ನಿನ್ನ, ಪಲ್–ಅನೇಕವಿಧವಾದ, ಮಾ ಮಾಯಮ್ – ಮಹಾ ಮಾಯಾರೂಪ ವಾದ ಪ್ರಕೃತಿಯಿಂದ ಉಂಟಾದ, ಪಲ್ ಪಿಱವಿಯಿಲ್–(ದೇವಾದಿ) ಅನೇಕ ಜನ್ಮಗಳಲ್ಲಿ, ಪಡಿಕಿನ್ಱ–ಹೊಂದಿ ಸೇರಿರುವ, ಯಾನ್–ನಾನು, ತೊಲ್–ಅನಾದಿಯಾದ, ಮಾ–ಅಪರಿಚ್ಛೇದ್ಯವಾದ, ವಲ್–ಪ್ರಬಲವಾದ, ವಿನೈ–ಪಾಪಗಳ, ತೊಡರ್ ಕಳೈ–ಅನುಬನ್ಧಗಳನ್ನು (ಪರಂಪರೆಗಳನ್ನು), ಮುದಲ್–ಸಮೂಲವಾಗಿ, ಅರಿನ್ದು–ಛೇದಿಸಿ, ನೀ–ನಿನ್ನ, ಮಾ–ಶ್ಲಾಘ್ಯವಾದ, ತಾಳ್–ಪಾದಗಳನ್ನು, ಶೇರ್ನ್ದು–ಸೇರಿ, ನಿಱ್ಪದು–ಸ್ಥಿರವಾಗಿ ನಿಲ್ಲೋಣವು, ಎಞ್ಞಾನ್ಱುಕೊಲ್–ಯಾವ ಕಾಲದಲ್ಲೋ!.

( ಸ–ಗಾ. ರ ॥ )—

**ಮಾತುಂ ತ್ವಂ ಪೃಥಿವೀಂ ವಿಶಾಲಕಠಿನಾಂ ಪಾದಾಬ್ಜತೋ ವಾಮನ–**
**ಶ್ರೀಶಾಭೂಃ ಕಿಲ! ಮಾಯಯಾ ತವ ಹರೇ! ನಾನಾವಿಧಾಜ್ಜನ್ಮತಃ |**
**ಕ್ಲಿನ್ನೋಽಹಂ ಬತ! ದುರ್ನಿವಾರದುರಿತಕ್ಲೇಶಾನುಬನ್ಧಾವಲೀ–**
**ಮೂಲಚ್ಛೇದಕರಃ ಕದಾ ತವ ಮಹತ್ಪಾದಾಮ್ಬುಜಂ ಸಂಶ್ರಯೇ ? ॥**

ತಾ॥ (ವಾಮನಾವತಾರದಲ್ಲಿ ಮಾಡಿದ ಮಹೋಪಕಾರವನ್ನು ಸ್ಮರಿಸಿ, ಜಗತ್ತನ್ನೆಲ್ಲಾ ಅಳೆದ ಆ ಪಾದಾರವಿನ್ದವನ್ನು ಎಂದಿಗೆ ಸೇರ ವೆನೆಂದು ಹೇಳುತ್ತಾರೆ.) ವಿಶಾಲವಾಗಿಯೂ ಕಠಿನವಾಗಿಯೂ ಇರುವ ಭೂಮಿಯನ್ನೆಲ್ಲಾ ಅಳೆದ ವಾಮನನೇ! ನಿನ್ನ ಮಾಯಾರೂಪವಾದ ಪ್ರಕೃತಿಗೆ ವಶ್ಯನಾಗಿ ಅನೇಕ ಜನ್ಮಗಳನ್ನು ಹೊಂದಿ ಸನ್ತಪ್ತನಾಗಿರುವ ನಾನು ಪ್ರಬಲವಾದ ಪಾಪಕರ್ಮಗಳನ್ನು ಸಮೂಲವಾಗಿ ಛೇದಿಸಿ ನಿನ್ನ ಶ್ಲಾಘ್ಯವಾದ ಪಾದಾರವಿನ್ದಗಳನ್ನು ಸ್ಥಿರವಾಗಿ ಎಂದಿಗೆ ಸೇರುವೆನೋ! ಎಂದು ಹಂಬಲಿಸುತ್ತಾರೆ.

(೩) ಕೊಲ್ಲಾ ಮಾಕ್ಕೋಲ್ ಕೊಲೈಶೆಯ್ದು ಪಾರತಪ್ಪೋರ್,
ಎಲ್ಲಾಚ್ಚೇನೈಯುಮಿರುನಿಲತ್ತವಿತ್ತ ವೆನ್ದಾಯ್,
ಪೊಲ್ಲಾವಾಕ್ಕೈಯಿನ್ ಪುಣರ್ವಿನೈ ಯಱುಕ್ಕಲಱಾ,
ಶೊಲ್ಲಾಯಾನುನ್ನೈಚ್ಚಾರ್ವದೋರ್ ಶೂಳ್ಚ್ಚಿಯೇ.

ಪ್ರ॥ ಕೊಲ್ಲಾ – ಕೊಲ್ಲುವುದಕ್ಕೆ ಆಯುಧವಲ್ಲದ, ಮಾ – ಕುದುರೆಯನ್ನು ನಡೆಸಲು ಸಾಧನವಾದ, ಕೋಲ್–ಚಾವಟಿ ಕೋಲಿನಮೂಲಕ, ಕೊಲೈಶೆಯ್ದು–ಶತ್ರುವಧವಂಮಾಡಿ, ಪಾರತಪ್ಪೋರ್ – ಭಾರತಯುದ್ಧದಲ್ಲಿ, ಎಲ್ಲಾಚ್ಚೇನೈಯುಮ್–(ಭೂಭಾರವಾಗಿದ್ದ) ಉಭಯಪಕ್ಷಗಳ ಸೈನ್ಯಗಳನ್ನೂ, ಇರುನಿಲತ್ತು–

(ಧರ್ಮಕ್ಷೇತ್ರವಾದ) ಮಹಾಭೂಮಿಯಲ್ಲಿ, ಅವಿತ್ತ--ನಾಶಪಡಿಸಿದ, ಎನ್ದಾಯ್-ನನ್ನ ಸ್ವಾಮಿಯೇ! ಪೊಲ್ಲಾ – ಅನರ್ಥಹೇತುವಾದ, ಆಕ್ಕೈಯಿನ್-ಶರೀರದ, ಪುಣರ್ವಿನೈ-ಸಂಬನ್ಧವನ್ನು, ಅಱುಕ್ಕಲ್-ಭೇದಿಸಲು ಯತ್ನಿಸಿದರೂ, ಅಱಾ-(ನನ್ನಿಂದ) ಅದು ಭೇದ್ಯವಲ್ಲ; ಯಾನ್-ನಾನು, ಉನ್ನೈ-(ರಕ್ಷಕನಾದ) ನಿನ್ನನ್ನು, ಶಾರ್ವದು – ಸೇರುವುದಕ್ಕೆ, ಓರ್ಶೂೞ್ಚಿ – ಒಂದು ಒಳ್ಳೇ ಉಪಾಯವನ್ನು, ಶೊಲ್ಲಾಯ್-(ಅರ್ಜುನನಿಗೆ ಹೇಳಿದಂತೆ) ಕೃಪೆಯಿಂದ ಹೇಳು.

( ಸ-ಗಾ-ರ || )—

**ನೇತುಂ ವಾಜಿಗಣಂ ಹಿ ವೇತ್ರಭೃದಭೂಸ್ತ್ವಂ ಶಸ್ತ್ರಹೀನೋಽವಧೀ-**
**ರ್ದುಷ್ಟಾನ್ ಭಾರತಸಙ್ಗರೇ! ಮಮ ವಿಭೋ! ತ್ವಂ ಸರ್ವಸೇನಾನ್ತಕಃ |**
**ಭೂಮ್ಯಾಮತ್ರ ನ ನಶ್ಯತಿ ಸ್ವಯಮಯಂ ದುರ್ದೇಹಬನ್ಧೋ ಮಮ**
**ಸ್ವಾಮಿನ್! ಮೇ ವದ ಸಾಧನಂ ತವ ಮಹಾಸಙ್ಗಾಯ ಸಂರಕ್ಷಿತುಃ ||**

ತಾ|| (ಕೃಷ್ಣಾವತಾರ ಚರಿತವನ್ನು ಸ್ಮರಿಸಿ, ಆ ಕಾಲದಲ್ಲೂ ನಾನು ನಿನ್ನನ್ನು ಆಶ್ರಯಿಸಲಿಲ್ಲವೆಂದು ಖಿನ್ನರಾಗುತ್ತಾರೆ.) ಶಸ್ತ್ರವನ್ನು ತಾನು ಹಿಡಿಯದೆ, ಸಾರಥ್ಯವನ್ನು ಮಾಡುವುದಕ್ಕಾಗಿ ಚಾವಟಕೋಲನ್ನು ಹಿಡಿದು, ಭಾರತಯುದ್ಧದಲ್ಲಿ (ಭೂಭಾರವಾಗಿದ್ದ) ಉಭಯಪಕ್ಷಗಳ ಸೈನ್ಯಗಳನ್ನೂ ಧ್ವಂಸಮಾಡಿದ ನನ್ನ ಸ್ವಾಮಿಯೇ! ಅನರ್ಥಹೇತುವಾದ ಈ ಶರೀರದ ಸಂಬನ್ಧವನ್ನು ಭೇದಿಸಲು ನನ್ನಿಂದ ಸಾಧ್ಯವಲ್ಲ. ಆದುದರಿಂದ ಸರ್ವರಕ್ಷಕನಾದ ನಿನ್ನನ್ನು ನಾನು ಸೇರುವುದಕ್ಕೆ ಒಂದು ಒಳ್ಳೇ ಉಪಾಯವನ್ನು ನೀನೇ ಹೇಳಿ ಅರ್ಜುನನನ್ನು ಅನುಗ್ರಹಿಸಿದಂತೆ ನನ್ನನ್ನೂ ಅನುಗ್ರಹಿಸು – ಎಂದು ಪ್ರಾರ್ಥಿಸುತ್ತಾರೆ.

(೪) ಶೂೞ್ಚಿ ಞಾನಚ್ಚುಡರೊಳಿಯಾಕಿ, ಯೆನ್ಱುಮ್
ಏೞ್ಚಿಕ್ಕೇಡಿನ್ಱಿ ಯೆಙ್ಗಣುಮ್ ನಿಱೈನ್ದ ವೆನ್ದಾಯ್,
ತಾೞ್ಚಿ ಮಱ್ಱೆಙ್ಗುಮ್ ತವಿರ್ನ್ದು ನಿನ್ ತಾಳಿಣೈಕ್ಕೀೞ್,
ವಾೞ್ಚಿ ಯಾನ್ ಶೇರುಮ್ ವಕೈಯರುಳಾಯ್ ವನ್ದೇ.

ಪ್ರ|| ಶೂೞ್ಚಿ-ಎಲ್ಲವನ್ನೂ ಸುತ್ತಿಕೊಂಡಿರುವ, ಞಾನಚ್ಚುಡರ್ – ಜ್ಞಾನ ಪ್ರಭೆಯುಳ್ಳ, ಒಳಿ ಆಕಿ-ಸ್ವಯಂಪ್ರಕಾಶಸ್ವರೂಪನಾಗಿ, ಎನ್ಱುಮ್-ಯಾವಾಗಲೂ, ಏೞ್ಚಿ-ವಿಕಾಸವೂ, ಕೇಡು-ಸಂಕೋಚವೂ, ಇನ್ಱಿ-ಇಲ್ಲದಂತೆ, ಎಙ್ಗಣುಮ್-ಸರ್ವಪ್ರದೇಶದಲ್ಲೂ, ನಿಱೈನ್ದ-ಪೂರ್ಣವಾಗಿ ವ್ಯಾಪಿಸಿರುವ, ಎನ್ದಾಯ್-ನನ್ನ

ಸ್ವಾಮಿಯೇ, ಮಱ್ಱು-(ನಿನ್ನನ್ನು ಹೊರತು) ಇತರವಾದ, ಎಲ್ಲಾಮ್-ಸಮಸ್ತ ವಿಷಯಗಳಲ್ಲೂ, ತಾಱ್ಱ್-ಪ್ರಾವಣ್ಯವನ್ನು, ತವಿರ್ನ್ದು-ಬಿಟ್ಟು, ನಿ-ನಿನ್ನ, ತಾಳ್-ಪಾದಗಳ, ಇಣೈ-ಯುಗಳದ, ಕೀೞ್-ಕೆಳಗೆ, ವಾೞ್ಱ್-ಬಾಳೋಣವನ್ನು, ಯಾ-ನಾನು, ಶೇರುಮ್-ಹೊಂದುವ, ವಕೈ-ಪ್ರಕಾರವನ್ನು, ವನ್ದು-(ನನ್ನ ಮುಂದೆ) ಬಂದು ನಿಂತು, ಅರುಳಾಯ್-ಕೃಪೆಯಿಂದ ಹೇಳು.

( ಸ--ಗಾ-ರ || )—

**ಜ್ಞಾನೌಜ್ಜ್ವಲ್ಯಮಹಾನಿಧೇ ! ಮಮ ವಿಭೋ! ಸರ್ವತ್ರ ಚ ವ್ಯಾಪ್ತಿತ-**
**ಸ್ಸಮ್ಪೂರ್ಣೋಽಪಿ ಸದಾಽಪಿ ಚಾದ್ಯ ದಯಯಾ ಸ್ಥಿತ್ವಾ ಮದಗ್ರೇ ವದ |**
**ಧನ್ಯೋಽಸ್ಮ್ಯಹಂ ಕಥಂ ಭವೇಯಮನಘಸ್ಸನ್ತ್ಯಕ್ತಭಾವಾನ್ತರ-**
**ಸ್ತ್ವತ್ಪಾದಾಮ್ಬುಜಯುಗ್ಮಮಾತ್ರಶರಣಶ್ರೀಮನ್! ಮುರಾರೇ! ಹರೇ? ||**

ತಾ|| (ನಿನ್ನ ಅನ್ತರ್ಯಾಮಿತ್ವವೂ ನನಗೆ ಉತ್ತಾರಕವಾಗಲಿಲ್ಲವೆಂದು ಹೇಳಿ, ಅವತಾರವಮಾಡಿ ಪ್ರತ್ಯಕ್ಷದಲ್ಲಿಯೇ ನನ್ನನ್ನು ಅಂಗೀಕರಿಸಬೇಕೆಂದು ಪ್ರಾರ್ಥಿಸುತ್ತಾರೆ.) ಸರ್ವತ್ರ ವ್ಯಾಪಿಸಿ ಇರುವ ಜ್ಞಾನಪ್ರಭೆಯುಳ್ಳ ಸ್ವಯಂಪ್ರಕಾಶಸ್ವರೂಪನಾದ ನೀನು ಸಂಕೋಚವಿಕಾಸಗಳಿಲ್ಲದೆ ಸರ್ವತ್ರ ಪ್ರಕಾಶಿಸುತ್ತಿದ್ದೀಯೆ. ಇತರ ವಿಷಯವ್ಯಾವೃತ್ತನಾಗಿ ನಾನು ನಿನ್ನ ಪಾದಾರವಿನ್ದಯುಗಳವನ್ನೇ ಆಶ್ರಯಿಸಿ ಉಜ್ಜೀವಿಸುವ ಪ್ರಕಾರವನ್ನು ನನಗೆ ನೀನು ಪ್ರತ್ಯಕ್ಷನಾಗಿಯೇ (ಅವತರಿಸಿ ಬಂದು) ನಿಂತು ಉಪದೇಶಿಸು.

(೨೧) ವನ್ದಾಯ್ ಪೋಲೇ ವನ್ದು ಎನ್ಮನತ್ತಿನೈ ನೀ,
ಶಿನ್ದಾಮಲ್ ಶೆಯ್ದಾಯ್ ಇದುವೇ ಯಿದುವಾಕಿಲ್,
ಕೊನ್ದಾರ್ ಕಾಯಾವಿನ್ ಕೊೞುಮಲರ್ ತಿರುನಿಱತ್ತ
ವೆನ್ದಾಯ್, ಯಾನುನ್ನೈ ಯೆಙ್ಗು ವನ್ದಣುಕಿಪ್ಪನೇ.

ಪ್ರ|| ವನ್ದಾಯ್ಪೋಲೇ-(ಪ್ರಹ್ಲಾದ-ಗಜೇಂದ್ರಾದಿಗಳನ್ನು ಕುರಿತು) ಬಂದ ಹಾಗೆ, ವನ್ದುಮ್-(ರಕ್ಷಿಸುವುದಕ್ಕೆ) ಬಂದಾದರೂ, ಎನ್-ನನ್ನ, ಮನತ್ತಿನೈ-ಮನಸ್ಸನ್ನು, ನೀ-ನೀನು, ಶಿನ್ದಾಮಲ್-ಶಿಥಿಲವಾಗದಂತೆ, ಶೆಯ್ದಾಯ್-ಮಾಡುವುದಿಲ್ಲ. ಇದುವೇ-ಹೀಗೆ ಕೈಬಿಡೋಣವೇ, ಇದು ಆಕಿಲ್-ನಿನ್ನ ಸ್ವಭಾವವೆಂಬುದು ಆದರೆ, ಕೊನ್ದು ಆರ್-ಗೊಂಚಲುಗಳಿಂದ ತುಂಬಿದ, ಕಾಯಾವಿನ್ – ಅತಸೀ ಜಾತಿಯ ವೃಕ್ಷದ, ಕೊೞುಮಲರ್ – ರಮ್ಯವಾದ ಹೂವಿನ, ತಿರುನಿಱತ್ತ – ಬಣ್ಣವುಳ್ಳ, ಎನ್ದಾಯ್-ನನ್ನ ಸ್ವಾಮಿಯೇ, ಯಾನ್-ನಾನು, ಉನ್ನೈ-(ಇಷ್ಟು ಸುನ್ದರನಾಗಿ

ಪ್ರಕಾಶಿಸುತ್ತ ನನ್ನನ್ನು ವಶೀಕರಿಸಿದ) ನಿನ್ನನ್ನು, ಎಙ್ಙು-ಎಲ್ಲಿಗೆ, ವನ್ದು-ಬಂದು, ಅಣುಕಿಱ್ಪೇನ್-ಆಶ್ರಯಿಸಬಲ್ಲೆನು ?

( ಸ-ಗಾ-ರ ॥ )—

**ಪ್ರಾದುರ್ಭಾವವಶಾತ್ತ್ವಮಾಗತಮಮುಂ ಚೇತೋ ನ ಮೇ ತ್ವಾಂ ಭಜೇತ್ !**
**ತ್ವತ್ಪ್ರಾಪ್ತಿರ್ಯದಿ ದುರ್ಲಭಾಽಸ್ತಿ ಸತತಂ ಚೈವಂ ಮಮ ಶ್ರೀಪತೇ ।**
**ಕುತ್ರಾಹನ್ತು ಕದಾಽಽಶ್ರಯೇಯಮತಶೀಗುಚ್ಛಾಳಿಸಚ್ಛಾಯಮೇ:-**
**ವೈನಂ ತಾಂತ್ವ ಮಮ ನಾಥಮಚ್ಯುತಮಹೋ ! ಭಾಗ್ಯಂ ಕಿಮಾದೃಙ್ಮಮ? ॥**

ತಾ॥ (ಹಾಗೆ ನನಗೋಸ್ಕರ ಚಿರಕಾಲ ಇಲ್ಲಿ ವಾಸಮಾಡದೆ ಇದ್ದರೂ, ಪ್ರಹ್ಲಾದ-ಗಜೇನ್ದ್ರಾದಿಗಳಿಗೆ ಪ್ರತ್ಯಕ್ಷನಾದಂತೆಯಾದರೂ ಸಕೃತ್ ಪ್ರತ್ಯಕ್ಷನಾಗ ಬೇಕೆಂದು ಪ್ರಾರ್ಥಿಸುತ್ತಾರೆ.) ಒಂದುಸಲ ಬಂದು ಪ್ರತ್ಯಕ್ಷನಾಗಿಯಾದರೂ ನನ್ನ ಮನಶ್ಶೈಥಿಲ್ಯವನ್ನು ನೀನು ನಿವಾರಣಮಾಡುವುದಿಲ್ಲ. ಹೀಗೆ ಕೈಬಿಡೋಣವೇ ನಿನ್ನ ಸ್ವಭಾವವಾಗಿದ್ದರೆ, ರಮಣೀಯವಾದ ನಿನ್ನ ವಿಗ್ರಹಸೌನ್ದರ್ಯವನ್ನು ಅನು ಭವಿಸಲು ನಾನು ಎಲ್ಲಿ ನಿನ್ನನ್ನು ಆಶ್ರಯಿಸಬಲ್ಲೆನು ?—ಎಂದು ಹೇಳುತ್ತಾರೆ.

(೬) ಕಿಱ್ಪನ್ ಕಿಲ್ಲೇನೆನ್ಱಿಲನ್ ಮುನನಾಳಾಲ್,
ಅಱ್ಪಸಾರಙ್ಗಳವೈ ಶುವೈತ್ತಕನ್ಱೊೞಿನ್ದೇನ್,
ಪಱ್ಪಲ್ಲಾಯಿರಮುಯಿರ್ಶೆಯ್ದ ಪರಮಾ, ನಿನ್
ನಱ್ಪೊಱ್ಶೋದಿತ್ತಾಳ್ ನಣುಕುವದೆಞ್ಞಾನ್ಱೇ.

ಪ್ರ॥ ಮುನನಾಳಾಲ್ – ಪೂರ್ವಕಾಲದಲ್ಲೆಲ್ಲಾ, ಕಿಱ್ಪನ್ ಎನ್ಱಿಲನ್-(ನಾನು ಒಳ್ಳೇಕಾರ್ಯಗಳನ್ನು ಮಾಡಲು) ಶಕ್ತನೆಂದು ಮುಂದಾಳಾಗಿ ನಿಲ್ಲಲಿಲ್ಲ. ಕಿಲ್ಲೇನ್ ಎನ್ಱಿಲನ್-(ದುಷ್ಟಕೃತ್ಯಗಳನ್ನು) ಮಾಡಲಾರೆನೆಂದು ಹಿಂಜರಿಯಲಿಲ್ಲ. (ಈಪ್ರಕಾರ ಕೃತ್ಯಾಕೃತ್ಯ ವಿವೇಕವಿಲ್ಲದೆ) ಅಱ್ಪಸಾರಙ್ಗಳ್-ಅತ್ಯಲ್ಪಸಾರವುಳ್ಳ (ಅಸಾರವಾದ), ಅವೈ–ಆ ದುರ್ವಿಷಯಗಳನ್ನು, ಶುವೈತ್ತು-ಅನುಭವಿಸಿ, ಅಕನ್ಱು ಒೞಿನ್ದೇನ್– (ನಿನಗೆ) ದೂರಸ್ಥನಾಗಿಬಿಟ್ಟೆನು. ಪಱ್ಪಲ್ ಆಯಿರಮ್ ಉಯಿರ್ – ಅನೇಕ ಸಹಸ್ರ ಪ್ರಾಣಿಗಳನ್ನು, ಶೆಯ್ದ–ಸೃಷ್ಟಿಸಬಲ್ಲವನಾದ, ಪರಮಾ-ಸರ್ವೋತ್ಕೃಷ್ಟ ಶಕ್ತಿಯುಕ್ತನೇ, ನಿನ್–ನಿನ್ನ, ನಲ್-ಅಪ್ರಾಕೃತವಾದ, ಪೊನ್-ಅತಿರಮಣೀಯವಾದ, ಶೋದಿ-ತೇಜೋಮಯವಾದ, ತಾಳ್–ಪಾದಗಳನ್ನು, ನಣುಕುವದು – ಆಶ್ರಯಿ ಸೋಣವು, ಎಞ್ಞಾನ್ಱೇ-ಯಾವಾಗಲೋ !

( ಸ-ಗಾ-ರ ॥ )—

**ಕೃತ್ಯಾಕೃತ್ಯವಿವೇಕಶೂನ್ಯಹೃದಯಃ ತ್ವಾಂ ಪುರಾ ಸರ್ವದಾ**
**ನಾನಾದುರ್ವಿಷಯಪ್ರವರ್ತಿತಮನಾ ದೂರಂ ಗತೋಽಹಂ ತವ।**
**ಸಂಖ್ಯಾತೀತಮನೇಕಜನ್ಮನಿವಹಂ ಸಂಕಲ್ಪಮಾತ್ರಾದ್ಭವಾ-**
**ನುತ್ಪಾದ್ಯಾಸ್ತಿ ಪರಃ! ಕದಾ ಬತ! ಭಜೇ ದಿವ್ಯಂ ತ್ವದಂಘ್ರಿದ್ವಯಮ್? ॥**

ತಾ॥ (ಇತರ ವಿಷಯಪ್ರವಣನಾದ ನಾನು ನಿರತಿಶಯಭೋಗ್ಯವಾದ ನಿನ್ನ ಪಾದಗಳನ್ನು ಎಂದಿಗೆ ಸೇರುವೆನೆಂದು ಹೇಳುತ್ತಾರೆ.) ಇದುವರೆಗೆ ಕರ್ತವ್ಯವಾದ ಕಾರ್ಯಗಳಲ್ಲಿ ನಾನು ಪ್ರವರ್ತಿಸಲೂ ಇಲ್ಲ; ಅಕರ್ತವ್ಯವಾದ ದುಷ್ಟಕಾರ್ಯಗಳಿಂದ ನಿವೃತ್ತನಾಗಲೂ ಇಲ್ಲ. ಹೀಗೆ ದುರ್ವಿಷಯಪ್ರವೃತ್ತನಾಗಿ ನಾನು ನಿನಗೆ ದೂರಸ್ಥನಾಗಿ ಬಿಟ್ಟೆನು. ಸಕಲ ಲೋಕಸೃಷ್ಟಿಯಂಮಾಡಿದ ಸರ್ವಶಕ್ತನಾದ ನಿನ್ನ ದಿವ್ಯತೇಜೋಮಯವಾದ ಪಾದಗಳನ್ನು ಎಂದಿಗೆ ಸೇರುವೆನೋ! — ಎಂದು ಹಂಬಲಿಸುತ್ತಾರೆ.

(೭) ಎಞ್ಞಾನ್ಱುಮ್ ನಾಮಿರುನ್ದಿರುನ್ದಿರಙ್ಗಿ ನೆಞ್ಜೇ,
ಮೆಯ್ಞ್ಞಾನಮಿನ್ಱಿ ವಿನೈಯಿಯಲ್ ಪಿಱಪ್ಪೞುನ್ದಿ,
ಎಞ್ಞಾನ್ಱುಮೆಙ್ಗುಮೊೞಿವಱ ನಿಱೈನ್ದು ನಿನ್ಱ,
ಮೆಯ್ಞ್ಞಾನಚ್ಚೋದಿ ಕ್ಕಣ್ಣನೈ ಮೇವುದುಮೇ.

ಪ್ರ॥ ನೆಞ್ಜೇ—ಮನಸ್ಸೇ!, ಎಞ್ಞಾನ್ಱುಮ್—ಯಾವಾಗಲೂ, ಇರನ್ದಿರುನ್ದು—(ಈ ಸಂಸಾರಬನ್ಧದಲ್ಲಿ) ಇದ್ದು ಇದ್ದು, ಇರಙ್ಗಿ—ದುಃಖಪಟ್ಟು, ಮೆಯ್ಞಾನಮ್-ತತ್ತ್ವಜ್ಞಾನವು, ಇನ್ಱಿ-ಇಲ್ಲದೆ, ವಿನೈ ಇಯಲ್ – ಪಾಪದಿಂದ ಪ್ರವೃತ್ತವಾದ, ಪಿಱಪ್ಪು—ಜನ್ಮಗಳಲ್ಲಿ, ಅೞುನ್ದಿ – ಮುಳುಗಿ, ನಾಮ್ - (ಇದೇ ಯಾತ್ರೆಯಾಗಿಯುಳ್ಳ) ನಾವು, ಎಞ್ಞಾನ್ಱುಮ್—ಸರ್ವಕಾಲದಲ್ಲೂ, ಎಙ್ಗುಮ್—ಎಲ್ಲಾ ವಸ್ತುಗಳಲ್ಲೂ, ಒೞಿವು ಅಱ-ವಿಚ್ಛೇದವಿಲ್ಲದಂತೆ, ನಿಱೈನ್ದು—ಪರಿಪೂರ್ಣವಾಗಿ ವ್ಯಾಪಿಸಿ ನಿನ್ಱ-ನಿಂತಿರುವ, ಮೆಯ್ಞಾನಮ್ ಸತ್ಯಜ್ಞಾನಸ್ವರೂಪಿಯಾದ, ಶೋದಿ-ಜ್ಯೋತಿರ್ಮಯನಾದ, ಕಣ್ಣನೈ—ಶ್ರೀಕೃಷ್ಣನನ್ನು, ಮೇವುದುಮೇ – ಯಾವಾಗ ಸೇರುವೆವು?

( ಸ–ಗಾ–ರ || )—

**ಹೇ ಚಿತ್ತ ! ತ್ವದಧೀನ ಏವ ಸತತಂ ಮೋಹಾಬ್ಧಿಮಗ್ನೋ ಽಸ್ಮ್ಯಹಂ**
**ದುಃಖೀ ಪಾಪರತೋ ಭವಾಮ್ಬುಧಿಗತಃ ! ಕಿಂ ಮನ್ದಭಾಗ್ಯಸ್ಯ ಮೇ |**
**ಕಿಂಚಿತ್ಸಾಧನಮಸ್ತಿ ತಸ್ಯ ಪರಮಜ್ಯೋತಿರ್ಮಯಸ್ಯಾಶ್ರಯೇ**
**ಶ್ರೀಕೃಷ್ಣಸ್ಯ ಸಮಸ್ತವಸ್ತುನಿವಹವ್ಯಾಪ್ತಿಪ್ರತಿಷ್ಠಾಭೃತಃ! ||**

ತಾ|| (ಮನ್ದಭಾಗ್ಯನಾದ ನನಗೆ ಪ್ರಾಪ್ತಿಸಾಧನವು ಇಲ್ಲವೆಂದು ಕೊರತೆ ಪಡುತ್ತಾರೆ.) ಎಲೈ ಮನಸ್ಸೇ!! ಯಾವಾಗಲೂ ನಾನು ಸಂಸಾರಪಾಶದಲ್ಲಿಯೇ ಸಿಕ್ಕಿ ತತ್ತ್ವಜ್ಞಾನವಿಲ್ಲದೆ ಪಾಪಪ್ರವೃತ್ತವಾದ ಅನೇಕ ಜನ್ಮಗಳಲ್ಲಿ ಮಗ್ನನಾಗಿರುವುದರಿಂದ ಸರ್ವವ್ಯಾಪಿಯಾಗಿ ಸತ್ಯಜ್ಞಾನಸ್ವರೂಪಿಯಾದ ದಿವ್ಯತೇಜೋಮಯನಾದ ಶ್ರೀಕೃಷ್ಣನನ್ನು ಯಾವಾಗ ಸೇರುವೆನು ? (ಅವನನ್ನು ಹೊಂದಲು ನನಗೆ ಸಾಧನವೇ ಇಲ್ಲವೆಂದು ವಿಷಣ್ಣರಾಗಿದಾರೆ)

(೮) ಮೇವು ತುನ್ಬವಿನೈಕಳೈ ವಿಡುತ್ತುಮಿಲೇನ್,
ಓವುದಲಿನ್ಱಿ ಉನ್‌ಕಳಲ್ ವಣಙ್ಗಿಱ್ಱಿಲೇನ್,
ಪಾವುತೊಲ್‌ಶೀರ್ ಕಣ್ಣಾ ಎನ್‌ಪರಂಶುಡರೇ,
ಕೂವುಕಿನ್ಱೇನ್ ಕಾಣ್ಬಾನೆಙ್ಗೆಯ್‌ದ ಕ್ಕೂವುವನೇ.

ಪ್ರ|| ಮೇವು ತುನ್ಬಮ್-ಸನ್ತತ ದುಃಖಜನಕವಾದ, ವಿನೈಕಳೈ-ಪಾಪಗಳನ್ನು, ವಿಡುತ್ತುಮಿಲೇನ್- (ನಾನು) ನಾಶಪಡಿಸಲೂ ಇಲ್ಲ; ಓವುದಲ್ ಇನ್ಱಿ-ಅವಿಚ್ಛಿನ್ನವಾಗಿ, ಉನ್-ನಿನ್ನ, ಕೞಲ್-ಪಾದಗಳನ್ನು, ವಣಙ್ಗಿಱ್ಱಿಲೇನ್-ನಮಸ್ಕರಿಸಲೂ ಇಲ್ಲ. ಪಾವು-ಸರ್ವತ್ರವಿಸ್ತೃತವಾಗಿ, ತೊಲ್-ಅನಾದಿಯಾಗಿ ಸ್ವಾಭಾವಿಕವಾಗಿರುವ, ಶೀರ್-ಕಲ್ಯಾಣಗುಣಗಳುಳ್ಳ, ಕಣ್ಣಾ-ಶ್ರೀಕೃಷ್ಣನೇ, ಎನ್-ನನ್ನ, ಪರಂಶುಡರೇ-ನಿರವಧಿಕತೇಜೋರೂಪನೇ, ಕಾಣ್ಬಾನ್-(ನಿನ್ನನ್ನು) ಕಾಣಬೇಕೆಂದು, ಕೂವುಕಿನ್ಱೇನ್-ಕೂಗುತ್ತಿದೇನೆ. ಎಙ್ಗುಎಯ್‌ದ-ಎಲ್ಲಿ ಆಶ್ರಯಿಸಲು, ಕೂವುವನ್-ಕೂಗುವೆನು ?

( ಸ–ಗಾ–ರ || )—

**ನಾನಾದುಃಖಕರಾಘರಾಶಿಸರಣಿಧ್ವಂಸಾಯ ಯತ್ನೋ ನ ಮೇ**
**ತ್ವತ್ಪಾದಾಮ್ಬುಜಸನ್ನತಿಶ್ಚ ಸತತಂ ನೈವಾಸ್ತಿ ಮೇ ಶ್ರೀಪತೇ |**
**ಸೌಶೀಲ್ಯಾದಿನಿಧೇ ! ಮಮಾಪಿ ಚ ವಿಭೋ! ಶ್ರೀಕೃಷ್ಣ! ತೇಜೋನಿಧೇ!**
**ಪಶ್ಯೇಯಂ ತವ ದಿವ್ಯರೂಪಮಿತಿ ಚ ಕ್ರನ್ದಾಮಿ! ಕುತ್ರಾಶ್ರಯೇ? ||**

ತಾ|| (ಸಾಧನಾನುಷ್ಠಾನವಿಲ್ಲದೆ ಇರುವ ನಾನು ಎಲ್ಲಿಗೆ ಬಂದು ನಿನ್ನನ್ನು ಆಶ್ರಯಿಸಲು ಕೂಗುವೆನೆಂದು ಹೇಳುತ್ತಾರೆ.) ಸನ್ತತದುಃಖಜನಕವಾದ ನನ್ನ ಪಾಪಗಳನ್ನು, ನಾನು ಸಾಧನಾನುಷ್ಠಾನದಿಂದ ನಾಶಪಡಿಸಲೂ ಇಲ್ಲ; ಅವಿಚ್ಛಿನ್ನವಾಗಿ ನಿನ್ನ ಪಾದಗಳನ್ನು ನಮಸ್ಕರಿಸಲೂ ಇಲ್ಲ. ಆದರೂ, ನಿರವಧಿಕ ಕಲ್ಯಾಣ ಗುಣಾಕರನಾದ ಶ್ರೀಕೃಷ್ಣನೇ! ಪರಞ್ಜ್ಯೋತಿಸ್ಸ್ವರೂಪನಾದ ನಿನ್ನನ್ನು ಕಾಣಬೇಕೆಂದು ವೃಥಾ ಕೂಗುತ್ತಿದೇನೆ. ಇಂತಹ ನಾನು ನಿನ್ನನ್ನು ಎಲ್ಲಿ ಆಶ್ರಯಿಸಬಲ್ಲೆನೆಂದು ಭಾವವು.

(೯) ಕೂವಿಕ್ಕೂವಿ ಕ್ಕೊಡುವಿನೈ ತ್ತೊಡ್ತ್ಲುಳ್ ನಿನ್ಱು,
ಪಾವಿಯೇನ್ ಪಲಕಾಲಮ್, ವ್ವೞಿತಿಕೈತ್ತು ಅಲಮರುಕಿನ್ಱೇನ್
ಮೇವಿ ಯನ್ಱಾನಿರೈ ಕಾತ್ತವನ್ ಉಲಕಮೆಲ್ಲಾಮ್
ತಾವಿಯ ವಮ್ಮಾನೈ ಎಙ್ಗಿನಿ ತ್ತಲೈಪ್ಪೆಯ್‍ವೇನೇ.

ಪ್ರ|| ಕೊಡುವಿನೈ-ಕ್ರೂರವಾದ ಪಾಪಗಳುಳ್ಳ, ತೂಱ್ಱುಳ್-ಸಂಸಾರಪಾಶದಲ್ಲಿ ಸಿಕ್ಕಿ, ನಿನ್ಱು-ನಿಂತು, ಪಲಕಾಲಮ್-ಅನೇಕ ಕಾಲದವರೆಗೆ, ವೞಿತಿಕೈತ್ತು-ಹೊರಗೆಹೊರಡಲು ದಾರಿತಿಳಿಯದೆ ಭ್ರಮಿಸಿ, ಅಲಮರುಕಿನ್ಱೇನ್-ಅಲೆಯುತ್ತಿರುವ, ಪಾವಿಯೇನ್ - ಪಾಪಿಷ್ಠನಾದ ನಾನು, ಅನ್ಱು-ಆ (ಗೋಪಾಲನಾಗಿ ನಿಂತ) ಕಾಲದಲ್ಲಿ, ಮೇವಿ- ಅತ್ಯಾದರದಿಂದ, ಆನಿರೈ-ಪಶುಗಳನ್ನು, ಕಾತ್ತವನ್- ರಕ್ಷಿಸಿದವನಾಗಿಯೂ, ಉಲಕಮೆಲ್ಲಾಮ್ - ಸಕಲಲೋಕಗಳನ್ನೂ, ತಾವಿಯ - (ತ್ರಿವಿಕ್ರಮಾವತಾರದಲ್ಲಿ) ಧರಿಸಿದವನಾಗಿಯೂ ಇರುವ, ಅಮ್ಮಾನೈ-ಸರ್ವೇಶ್ವರನನ್ನು, ಆ ಕಾಲದಲ್ಲಿ ಸುಮ್ಮನಿದ್ದ ನಾನು) ಇನಿ- ಈ ಕಾಲದಲ್ಲಿ, ಕೂವಿಕ್ಕೂವಿ-ಕೂಗಿ ಕೂಗಿ, ಎಙ್ಗು-ಎಲ್ಲಿ, ತಲೈಪ್ಪೆಯ್‍ವೇನ್ (ನಿನ್ನನ್ನು) ಸೇರುವೆನು?

( ಸ-ಗಾ-ರ || )—

**ಘೋರಾಘಾಬ್ಧಿನಿಮಗ್ನ ಏವ ಸುಚಿರಂ ಪ್ರಭ್ರಷ್ಟಮಾರ್ಗಸ್ಸ್ವಯಂ**

**ಭ್ರಾನ್ತೋಽಹಂ ಕಿಲ ಮನ್ದಭಾಗ್ಯ ಇಹ ಹಿ! ತ್ವಾಂ ನಾಶ್ರಿತೋಽಹಂ ತದಾ|**

**ಗೋಪಾಲಂ ಜಗತಾಂ ಚ ಮಾನವಿಧಯೇ ತ್ರೈವಿಕ್ರಮಪ್ರಕ್ರಮಂ !**

**ಕ್ರನ್ದನ್ನೇವಮನಾಥವದ್ಭುವಿ ಕದಾ ತ್ವತ್ಸನ್ನಿಧಿಂ ಪ್ರಾಪ್ನುಯಾಮ್ ? ||**

ತಾ|| (ನೀನು ಸದಸದ್ವಿವೇಚನಮಾಡದೆ ಸರ್ವಲೋಕರಕ್ಷಣವಂ ಮಾಡಿದಾಗಲೂ ನಿನ್ನನ್ನು ನಾನು ಆಶ್ರಯಿಸದೆಹೋದೆನು; ಇನ್ನುಮೇಲೆ ನಿನ್ನನ್ನು ಹೊಂದುವ ಸಂಭವವುಂಟೋ – ಎಂದು ನಿರಾಶರಾದಂತೆ ಕೂಗುತ್ತಾರೆ.) ಮಹಾಪಾಪಭರಿತವಾದ ಸಂಸಾರಪಾಶದಲ್ಲಿ ಸಿಕ್ಕಿ ಹೊರಗೆಬರಲು ದಾರಿತಿಳಿಯದೆ ಭ್ರಾನ್ತನಾಗಿ ಅಲೆಯುತ್ತಿರುವ ನಾನು ನಿನ್ನ ಕೃಷ್ಣಾವತಾರದಲ್ಲೂ ತ್ರಿವಿಕ್ರಮಾವತಾರದಲ್ಲೂ ಕೂಡ ನಿನ್ನನ್ನುಆಶ್ರಯಿಸದೆ; ಈಗ ವೃಥಾ ಕೂಗಿಕೂಗಿ ಶ್ರಾನ್ತನಾಗುತ್ತಿದೇನೆ. ನಿನ್ನನ್ನು ಎಲ್ಲಿ ಸೇರುವೆನು? (ಆ ಆಶೆಯೇ ಇಲ್ಲವೆಂದು ಕೊರಗುತ್ತಾರೆ.)

(೧೦) ತಲ್ಯೆಪ್ಪೆಯ್ ಕಾಲಮ್, ನಮ್ಮ‍ನ್ಮಮನ್ ಪಾಶಮ್ ವಿಟ್ಟಾಲ್,
ಅಲೈಪ್ಪೂಣುಣ್ಣುಮ್ ಅವ್ವಲ್ಲಲೆಲ್ಲಾಮ್ ಅಕಲ,
ಪ್ಪಲ್‍ಕಲೈ ಞಾನತ್ತೆನ್ ಕಣ್ಣನೈ ಕ್ಕಣ್ಡುಕೊಣ್ಡು,
ನಿಲ್ಯೆಪ್ಪೆತ್ತೆನ್ನೆಞ್ಜಮ್ ಪೆತ್ತದು ನೀಡುಯಿರೇ.

ಪ್ರ|| ನಮನ್ಮನ್ ಮರ್–ಯಮದೂತರು, ತಲ್ಯೆಪ್ಪೆಯ್‍ಕಾಲಮ್ ಸಮೀಪಿಸುವ ಕಾಲದಲ್ಲಿ, ಪಾಶಮ್‍ವಿಟ್ಟಾಲ್–ಬಲೆಯನ್ನು ಬೀಸಿದರೆ, ಅಲೈಪ್ಪೂಣ್ – (ಸಿಕ್ಕಿ) ಅಲೆಯುವುದನ್ನು, ಉಣ್ಣುಮ್– ಅನುಭವಿಸುವಂತೆ ಬರುವ, ಅ ಅಲ್ಲಲೆಲ್ಲಾಮ್– ಆ ದುಃಖವೆಲ್ಲಾ, ಅಕಲ–ಬಿಟ್ಟುಹೋಗುವಂತೆ, ಪಲ್‍ಕಲೈ–ನಾನಾವಿಧ ವೇದಶಾಸ್ತ್ರಗಳ, ಞಾನತ್ತು–ಜ್ಞಾನದಿಂದ ವೇದ್ಯನಾಗಿ, ಎ–ನನಗೆ ಸುಲಭನಾದ, ಕಣ್ಣನೈ–ಕೃಷ್ಣನನ್ನು, ಕಣ್ಡು ಕೊಣ್ಡು–ಕಣ್ಡು, ಎನೆಞ್ಜಮ್–ನನ್ನ ಮನಸ್ಸು, ನಿಲೈ–ಸ್ಥೈರ್ಯವನ್ನು, ಪೆತ್ತು–ಹೊಂದಿ, ಉಯಿರ್–ಆತ್ಮಸ್ವರೂಪವೂ, ನೀಡು–ನಿತ್ಯತ್ವವನ್ನು, ಪೆತ್ತದು–ಹೊಂದಿತು.

( ಸ–ಗಾ–ರ || )—

**ಕಾಲೇ ಚಾನ್ತಕದೂತಪಾಶವಿತತೇಸ್ತದ್ದುಃಖಶಾನ್ತ್ಯೈ ಸ್ವಯಂ**
**ವೇದ್ಯೈರ್ವೇದ್ಯಮುದಾರಮತ್ರ ಸುಲಭಂ ತ್ವಾಂ ಕೃಷ್ಣಮಸ್ಮ್ಯಾಶ್ರಿತಃ|**
**ಮಚ್ಚಿತ್ತಂ ಸಮಭೂತ್ಸ್ಥಿರಂ ಕಿಲ! ತದಾ ತ್ವಾತ್ಮಾ ಚ ಮೇ ನಿತ್ಯತಾಂ**
**ಸಮ್ಪ್ರಾಪ್ಯೈವ ಕೃತಿತ್ವಮುತ್ತಮಮಗಾದಿತ್ಯೇವ ಮೇ ನಿರ್ಣಯಃ||**

ತಾ|| (ಹೀಗೆ ವಿಷಣ್ಣರಾದ ಇವರನ್ನು ನೋಡಿ ನಿಮಗೋಸ್ಕರ ನಾನು ಶೇಷಾದ್ರಿಯಲ್ಲಿ ಬಂದು ನಿಂತಿದೇನೆಂದು ಭಗವಂತನು ಹೇಳಲು ಇವರು ಕಣ್ಣಿನಿಂದ ನೋಡಿ ಸಂತುಷ್ಟರಾಗುತ್ತಾರೆ.) ಯಮದೂತರ ಬಲೆಗೆ ಸಿಕ್ಕಿ ಅನುಭವಿಸುವ ದುಃಖವೆಲ್ಲಾ ಹೋಗುವಂತೆ, ವೇದವೇದ್ಯನಾದ ಶ್ರೀಕೃಷ್ಣನನ್ನು (ಶೇಷಾದ್ರಿಯಲ್ಲಿ) ಕಂಡು ನನ್ನ ಮನಸ್ಸು ಸ್ಥೈರ್ಯವನ್ನು ಹೊಂದಿತು; ನನ್ನ ಆತ್ಮಸ್ವರೂಪವೂ ನಿತ್ಯತ್ವವನ್ನು ಹೊಂದಿತು—ಎಂದು ಸಂತುಷ್ಟರಾಗಿದ್ದಾರೆ.

(೧೧) ಉಯಿರ್‌ಕಳೆಲ್ಲಾ ವುಲಕಮುಮುಡೈಯವನ್ನೈ,
ಕ್ಕುಯಿಲ್‌ಕೊಳ್‌ಶೋಲೈತ್ತೆನ್ ಕುರುಕೂರ್‌ಚ್ಚಡಕೋಪನ್
ಶೆಯಿರಿಲ್ ಶೊಲ್ಲಿಶೈಮಾಲೈ ಯಾಯಿರತ್ತುಳಿಪ್ಪತ್ತುಮ್,
ಉಯಿರಿನ್ಮೇಲಾಕ್ಕೈ ಯೂನಿಡೈ ಯೊಳಿವಿಕ್ಕುಮೇ.

ಪ್ರ|| ಎಲ್ಲಾ ಉಯಿರ್‌ಕಳ್ – ಸಕಲಾತ್ಮವರ್ಗಗಳನ್ನೂ, ಎಲ್ಲಾ ಉಲಕಮುಮ್–ಸಕಲಲೋಕಗಳನ್ನೂ, ಉಡೈಯವನ್ನೈ–ಪಡೆದಿರುವ ಸರ್ವೇಶ್ವರನನ್ನು ಕುರಿತು, ಕುಯಿಲ್‌ಕೊಳ್–ಕೋಕಿಲೆಗಳುಳ್ಳ, ಶೋಲೈ–ವನಗಳಿಂದಕೂಡಿದ, ತೆನ್–ರಮ್ಯವಾದ, ಕುರುಕೂರ್ – ಕುರುಕಾಪುರಿಯ ನಿರ್ವಾಹಕರಾದ, ಶಡಕೋಪನ್–ನಮ್ಮಾಳ್ವಾರ್‌ರಿಂದ ರಚಿತವಾದ, ಶೆಯಿರಿಲ್–ಶಬ್ದದೋಷವಿಲ್ಲದ, ಶೊಲ್–ಸೂಕ್ತಿಗಳುಳ್ಳ, ಇಶೈಮಾಲೈ–ಗಾನಮಾಲೆಯಾದ, ಆಯಿರತ್ತುಳ್–ಸಹಸ್ರ ಪದ್ಯಮಾಲೆಯೊಳು, ಇಪ್ಪತ್ತುಮ್–ಈ ದಶಕವು, ಉಯಿರಿನ್‌ಮೇಲ್ – ಆತ್ಮನಿಗೆ ಉಂಟಾದ ಬಂಧರೂಪವಾದ, ಊನ್ ಆಕ್ಕೈ ಇಡೈ–ಮಾಂಸಾದಿಮಯವಾದ ಶರೀರದ ದೆಸೆಯಿಂದ, ಒಳಿವಿಕ್ಕುಮ್–(ಬಂಧ) ನಿವೃತ್ತಿಯನ್ನುಂಟುಮಾಡುವುದು.

( ಸ-ಗಾ-ರ || ) —

ಲೋಕಾನಾಮಪಿ ಚಾತ್ಮನಾಮಧಿಪತಿಂ ಶ್ರೀಶಂ ಹರಿಂ ಕೋಕಿಲೈ
ರಾಕ್ರಾನ್ತೇ ಕುರುಕಾಪುರೇ ತರುಗಣೈಶ್ಚೇತೋಹರೇ ಸಂವಸನ್ |
ಸ್ತೋತುಂ ಚಾಶ ಸಹಸ್ರಸೂಕ್ತಿಸರಣಿಂ ಗೇಯಾಂ ತಂಶಠಾರಿರ್ಮುನಿ–
ಸ್ತತ್ರೇದಂ ದಶಕಂ ತನೋತಿ ಜಗತಾಂ ಮುಕ್ತಿಂ ವಪುಃಪಾಶತಃ ||

ತಾ॥ (ಈ ದಶಕದ ಪಠನಫಲವನ್ನು ಸೂಚಿಸುತ್ತಾರೆ.) ಸಕಲಾತ್ಮವರ್ಗಗಳನ್ನೂ ಸಕಲಲೋಕಗಳನ್ನೂ ಸೃಷ್ಟಿಮಾಡಿದ ಸರ್ವೇಶ್ವರನನ್ನು ಸ್ತುತಿಸುವುದಕ್ಕಾಗಿ ಶ್ರೀ ಕುರುಕಾಪುರೀಶ್ವರರಾದ ಶ್ರೀ ಶಠಾರಿಮುನಿವರ್ಯರಿಂದ ವಿರಚಿತವಾದ ದಿವ್ಯಗಾನರೂಪವಾದ ಸಹಸ್ರಪದ್ಯಮಾಲೆಯೊಳು ಈ ದಶಕವು ಜೀವಾತ್ಮನಿಗೆ ಶರೀರಸಮ್ಬನ್ಧದಿಂದ ಉಂಟಾದ ಬನ್ಧವನ್ನು ನಿವಾರಣಮಾಡುವುದು:—ಎಂದು ಫಲಶ್ರುತಿ.

( ದ್ರ-ಉ-ಸಂ ॥ )—

ಸಙ್ಕೋಚಿತಸ್ವಕರಣಸ್ಸ ಹರಿಂ ಯಥೇಷ್ಟಂ
ಭುಙ್ಕ್ತೇ ನ ಚಾಹಮಿತಿ ಭಿನ್ನಮತಿ ಶ್ಶಠಾರಿಃ ।
ಆಶ್ವಾಸಿತಶ್ಚ ಹರಿಣಾ ಸ್ವಮುಕತ್ತ್ವಯೈವ
ಭೋಗೇಷ್ವಶಕ್ತಿರಿತಿ ತತ್ಕಥಿತಂ ದ್ವಿತೀಯೇ ॥

( ದ್ರ-ಉ-ತಾ-ರ ॥ )—

ಸ್ರಷ್ಟಾ ಕ್ರಾನ್ತಾ ಚ ಲೋಕಾನ್ ಧೃತಧರಣಿಭರೋ ಽನನ್ಯಭೋಗ್ಯಾಂಘ್ರಿಯುಗ್ಮಃ
ಸ್ನಿಗ್ಧೋದ್ಯನ್ನೀಲರೂಪೋ ನಿರವಧಿರಸದಸ್ವಾಂಘ್ರಿರಧ್ಯಕ್ಷಮೂರ್ತಿಃ ।
ನಿತ್ಯೋಪಾಸ್ಯಸ್ವಪಾದೋ ನಿಖಿಲವಸುಮತೀಗೋಪನಸ್ವಾಂಘ್ರಿವೃತ್ತಿ-
ರ್ಮುಗ್ಧಾನ್ನೃತ್ತ್ಯಾ ವೃಷಾದ್ರೌ ಪ್ರಣತಜನಹಿತೋ ಯನುಪರವಶತಾಂ ಪ್ರೈಕ್ಷಿ ಲೋಕೈಕನಾಥಃ॥

(ಈ ದ್ವಿತೀಯದಶಕದ ಸಾರಾಂಶ.)—

ಈ ಎರಡನೆಯದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ತಮ್ಮ ಕರಣಶೈಥಿಲ್ಯದಿಂದ ಭಗವದನುಭವಯೋಗ್ಯತೆಯು ಇಲ್ಲವೆಂದು ಚಿನ್ತಾಕ್ರಾನ್ತರಾಗಿ, ಯಾವ ಅವತಾರಗಳಲ್ಲಿಯೂ ಹಿಂದೆ ತಾವು ಆಶ್ರಯಿಸಲಿಲ್ಲವೆಂದು ಖಿನ್ನರಾಗಿ ನಿರಾಶರಾದುದನ್ನು ನೋಡಿ, ಶೇಷಾದ್ರಿಯಲ್ಲಿ ಇವರಿಗೆ ತಾನು ಸೇವ್ಯನೆಂದು ಭಗವನ್ತನು ತಿಳಿಸಲು, ಇವರು ಕಣ್ಣಿನಿಂದ ದರ್ಶನಮಾಡಿ ಸನ್ತುಷ್ಟರಾಗುತ್ತಾರೆಂದು ತಾತ್ಪರ್ಯವು ಸೂಚಿಸಲ್ಪಟ್ಟಿದೆ.

ಶ್ರೀಃ

# ತೃತೀಯಶತಕದಲ್ಲಿ—ತೃತೀಯದಶಕ.

(ಒೞಿವಿಲ್ ಕಾಲಮ್—)

( ಈ ದಶಕದಲ್ಲಿ - ಶ್ರೀ ವೇಂಕಟಾದ್ರೀಶ್ವರನ ಸನ್ನಿಧಿಯಲ್ಲಿ ಸಕಲವಿಧ
ಕೈಂಕರ್ಯವನ್ನೂ ಮಾಡಬೇಕೆಂದು ಪ್ರಾರ್ಥಿಸುತ್ತಾರೆ.)

---

௨ (೧) ಒೞಿವಿಲ್ ಕಾಲಮೆಲ್ಲಾಂ ಉಡನಾಯ್ ಮನ್ನಿ,
ವೞುವಿಲಾವಡಿಮೈ ಶೆಯ್ಯವೇಣ್ಡುಂ ನಾಮ್,
ತೆೞಿಕುರಲರುವಿ ತ್ತಿರುವೇಙ್ಗಡತ್ತು,
ಎೞಿಲ್‌ಕೊಳ್‌ಶೋದಿ ಯೆನ್ದೈತನ್ದೈತನ್ದೈಕ್ಕೇ.

ಪ್ರ॥ ತೆೞಿಕುರಲ್-ಮಹಾಧ್ವನಿಯಾಗುವಂತೆ ಶಬ್ದಿಸುವ, ಅರುವಿ-ಪ್ರವಾಹಗಳುಳ್ಳ, ತಿರುವೇಙ್ಗಡತ್ತು - ಶ್ರೀ ವೇಂಕಟಾದ್ರಿಯಲ್ಲಿ ವಾಸಮಾಡುವುದರಿಂದ, ಎೞಿಲ್‌ಕೊಳ್ - ಸೌನ್ದರ್ಯವುಳ್ಳ, ಶೋದಿ - ತೇಜೋಮಯವಿಗ್ರಹದೊಡನೆ ಕೂಡಿರುವ, ಎನ್ದೈತನ್ದೈತನ್ದೈಕ್ಕು-ನಮ್ಮ ತಂದೆಗೆ ತಂದೆಯ ತಂದೆಗೆ(ನಮ್ಮ ಕುಲಪರಂಪರಾ ನಾಥನಿಗೆ), ನಾಮ್-(ದಾಸಭೂತರಾದ) ನಾವು, ಒೞಿವಿಲ್ ಕಾಲಮೆಲ್ಲಾಮ್-ಅವಿಚ್ಛಿನ್ನವಾಗಿ ಸರ್ವಕಾಲದಲ್ಲೂ, ಉಡನಾಯ್ -- (ಸರ್ವ ದೇಶದಲ್ಲೂ) ಕೂಡಿ, ಮನ್ನಿ-(ಸರ್ವಾವಸ್ಥೆಯಲ್ಲಿಯೂ) ವಿಶ್ಲೇಷವಿಲ್ಲದೆ ನಿಂತು, ವೞು ಇಲಾ--ಸ್ವಲ್ಪವೂ ನ್ಯೂನತೆಯಿಲ್ಲದಂತೆ, ಅಡಿಮೈ -- ಸರ್ವವಿಧಕೈಂಕರ್ಯಗಳನ್ನೂ, ಶೆಯ್ಯವೇಣ್ಡುಮ್-ಮಾಡಬೇಕು.

( ಸ-ಗಾ-ರ ॥ )—

ಸರ್ವತ್ರ ಚಾಖಿಲದಶಾಸ್ವಪಿ ಸರ್ವದಾಽಪಿ
ಪ್ರಾಪ್ಯಾತ್ರ ಕಿಙ್ಕರದಶಾಂ ವಯಮಪ್ರಯಾಮಃ ।
ಗಮ್ಭೀರನಾದಗಿರಿನಿರ್ಝರವೇಙ್ಕಟಾದ್ರಿ-
ಜ್ಯೋತಿಃ ಪರಂ ಮಮ ಪಿತುಶ್ಚ ಪಿತಾಮಹಾಖ್ಯಾನ್ ॥

ತಾ|| ಶ್ರೀ ವೇಂಕಟಾದ್ರಿಯಲ್ಲಿ ವಾಸಮಾಡುವ ವಿಷ್ವಕ್ಸೇನೋಪಾಸ್ಯನಾದ ನಮ್ಮ ಕುಲಪರಮ್ಪರಾನಾಥನಿಗೆ ನಾವು ಅವಿಚ್ಛಿನ್ನವಾಗಿ ಸರ್ವದೇಶ ಸರ್ವಕಾಲ ಸರ್ವಾವಸ್ಥೆಗಳಲ್ಲೂ ಸರ್ವವಿಧಕೈಂಕರ್ಯಗಳನ್ನೂ ಮಾಡಬೇಕೆಂದು ಆಶಿಸುತ್ತಾರೆ.

(೨) ಎನ್ದೈತನ್ದೈತನ್ದೈತನ್ದೈತನ್ದೈಕ್ಕುಮ್
ಮುನ್ದೈ, ವಾನವರ್ ವಾನವರ್‍ಕೋನೊಡುಮ್,
ಶಿನ್ದುಪೂಮಕಿೞುಮ್ ತಿರುವೇಙ್ಗಡತ್ತು,
ಅನ್ದಮಿಲ್‍ಪುಗೞ್ ಕಾರೆೞಿಲಣ್ಣಲೇ.

ಪ್ರ|| ಎನ್ದೈತನ್ದೈ ತನ್ದೈ ತನ್ದೈ ತನ್ದೈಕ್ಕುಮ್ ಮುನ್ದೈ-ನಮ್ಮ ಉತ್ಪತ್ತಿ ಪರಂಪರೆಯಲ್ಲಿ ಪ್ರಥಮನಾದವನು, ವಾನವರ್-ನಿತ್ಯಸೂರಿಗಳು, ವಾನವರ್ ಕೋನೊಡುಮ್-ಅವರಲ್ಲಿ ಮುಖ್ಯರಾದ ವಿಷ್ವಕ್ಸೇನರೊಡನೆ ಸೇರಿ, ಶಿನ್ದುಪೂಮ ಕಿೞುಮ್ – ಚೆಲ್ಲಿದ ಪುಷ್ಪಗಳು (ತನ್ನ ಸ್ಪರ್ಶದಿಂದ) ವಿಕಾಸವಂ ಹೊಂದುವಂತೆ ಇರುವ, ತಿರುವೇಙ್ಗಡತ್ತು-ಶ್ರೀವೇಂಕಟಾದ್ರಿಯಲ್ಲಿ ವಾಸಮಾಡುವುದರಿಂದ, ಅನ್ದಮಿಲ್-ನಿರವಧಿಕವಾದ, ಪುಗೞ್-ಗುಣೋತ್ಕರ್ಷವುಳ್ಳ, ಕಾರ್ ಎೞಿಲ್-ಶ್ಯಾಮಳವಾದ ವಿಗ್ರಹದ ಸೌನ್ದರ್ಯವುಳ್ಳ, ಅಣ್ಣಲ್-ಸರ್ವಸ್ವಾಮಿಯು.

( ಸ-ಗಾ-ರ || )—

ಮೂಲಂ ಪಿತುರ್ಮಮ ಪಿತುಶ್ಚ ಪಿತಾಮಹಸ್ಯ
ಶ್ರೀಶಃ ಪ್ರಭುರ್ಲಸತಿ ವೇಙ್ಕಟಶೈಲನಾಥಃ |
ಕಲ್ಯಾಣಸದ್ಗುಣಗಣಾಮ್ಬುನಿಧಿಸ್ಸಮಸ್ತೈ-
ರ್ದೇವೈಸ್ಸಸೂರಿತಿಲಕೈಃ ಕೃತಪುಷ್ಪವೃಷ್ಟಿಃ ||

ತಾ|| ನಮ್ಮ ಕುಲಪರಂಪರೆಗೆಲ್ಲಾ ನಾಥನಾದ ಜಗತ್ಕಾರಣವಸ್ತುವಾದ ಶ್ರೀಭಗವಂತನು ಶ್ರೀವೇಂಕಟಾದ್ರಿಯಲ್ಲಿ ವಾಸಮಾಡುತ್ತ ನಿರವಧಿಕ ಕಲ್ಯಾಣ ಗುಣವಿಶಿಷ್ಟನಾಗಿ ನೀಲಮೇಘಶ್ಯಾಮನಾಗಿ ದಿವ್ಯಸೌನ್ದರ್ಯವುಳ್ಳವನಾಗಿ ಪ್ರಕಾಶಿಸುತ್ತ, ನಿತ್ಯಸೂರಿಗಳೆಲ್ಲರಿಂದಲೂ ಇಲ್ಲಿಯೇ ಪುಷ್ಪಗಳಿಂದ ಅರ್ಚಿಸಲ್ಪಡುವುದರಿಂದ—ಪರಮಪದಕ್ಕೆ ನಾವು ಹೋಗಬೇಕಾಮಿಲ್ಲ; ನಾವೆಲ್ಲರೂ ಇಲ್ಲಿಯೇ ಕೈಂಕರ್ಯವಂ ಮಾಡಿ ಕೃತಾರ್ಥರಾಗೋಣ—ಎಂದು ಎಲ್ಲರಿಗೂ ಉಪದೇಶಿಸುತ್ತಾರೆ.

(೨) ಅಣ್ಣಲ್ಮಾಯನಣಿಕೊಳ್ ಶೆನ್ದಾಮರೈ-
ಕ್ಕಣ್ಣನ್, ಶೆಙ್ಗನಿವಾಯ್ ಕ್ಕರುಮಾಣಿಕ್ಕಮ್,
ತೆಣ್ಣಿಱೈಚ್ಚುನೈನೀರ್ ತ್ತಿರುವೇಙ್ಗಡತ್ತು,
ಎಣ್ಣಿಲ್ ತೊಲ್ಪುಕೞ್ ವಾನವರೀಶನೇ.

ಪ್ರ॥ ಅಣ್ಣಲ್-(ತನ್ನ ದಿವ್ಯಮಂಗಳವಿಗ್ರಹದಲ್ಲಿಯೇ) ತನ್ನ ಸ್ವಾಮಿತ್ವ ಪ್ರಕಾಶವುಳ್ಳ, ಮಾಯನ್-ತದನುಗುಣವಾಗಿ ಆಶ್ಚರ್ಯಗುಣವಿಭೂತ್ಯಾದಿ ಯುಕ್ತನಾದ, ಅಣಿಕೊಳ್-(ಆ ಐಶ್ವರ್ಯಸೂಚಕವಾದ) ಸೌನ್ದರ್ಯವನ್ನು ಪಡೆದಿರುವ, ಶೆನ್ದಾಮರೈಕ್ಕಣ್ಣನ್-ಕೆಂದಾವರೆಯಂತಿರುವ ನೇತ್ರಗಳುಳ್ಳವನು, ಶೆಙ್ಗನಿವಾಯ್-ಕೆಂಪಾದ (ತೊಂಡೆ) ಹಣ್ಣಿನಂತಿರುವ ಅಧರವುಳ್ಳ, ಕರುಮಾಣಿಕ್ಕಮ್-ನೀಲರತ್ನದಂತೆ ಉಜ್ಜ್ವಲವಾದ ಪ್ರಕಾಶವುಳ್ಳವನು, ತೆಣ್ಣಿಱೈ-ನಿರ್ಮಲವಾದ ವರ್ಣವುಳ್ಳ, ಶುನೈನೀರ್-ಪ್ರವಾಹಜಲಗಳಿಂದ ಭರಿತವಾದ, ತಿರುವೇಙ್ಗಡತ್ತು-ಶ್ರೀವೇಂಕಟಾದ್ರಿಯಲ್ಲಿ ವಾಸವಾಗಿರುವ, ಎಣ್ ಇಲ್-ಅಸಂಖ್ಯಾತವಾದ, ತೊಲ್ ಪುಕೞ್-ಸ್ವಾಭಾವಿಕವಾದ ಕಲ್ಯಾಣಗುಣಗಳ ಪ್ರಸಿದ್ಧಿಯುಳ್ಳ, ವಾನವರ್ ಈಶನ್-ನಿತ್ಯಸೂರಿಗಳಿಗೆ ಅಧಿಪತಿಯಾದವನು,

(ಸ-ಗಾ-ರ ॥)—

ನಾಥಃ ಕಿಲಾದ್ಭುತವಿಚಿತ್ರಚರಿತ್ರ ಏಷ-
ಶ್ರೀಪುಣ್ಡರೀಕನಯನೋಽಸಿತರತ್ನಕಾನ್ತಿಃ ।
ಬಿಮ್ಬಾಧರೋಽತ್ರ ವಿಮಲಾಮ್ಬುನಿ ವೇಙ್ಕಟಾದ್ರೌ
ದೇವಾಧಿದೇವ ಇಹ ಭಾತ್ಯಮಿತಪ್ರಭಾವಃ ॥

ತಾ॥ ತನ್ನ ದಿವ್ಯಮಂಗಳವಿಗ್ರಹ ಸೌನ್ದರ್ಯದಿಂದಲೇ ಸ್ವಾಮಿತ್ವಪ್ರಕಾಶವುಳ್ಳ, ಆಶ್ಚರ್ಯಗುಣಚೇಷ್ಟಿತಾದಿಯುಕ್ತನಾದ ಶ್ರೀ ಪುಂಡರೀಕಾಕ್ಷನು ಬಿಂಬಾಧರಶೋಭಿತನಾಗಿ ನೀಲಮಾಣಿಕ್ಯವರ್ಣನಾಗಿ ಶ್ರೀವೇಂಕಟಾದ್ರಿಯಲ್ಲಿವಾಸಮಾಡುತ್ತ, ಇಲ್ಲಿಯೇ ನಿತ್ಯಸೂರಿಗಳಿಂದಲೂ ಸಂಸೇವ್ಯನಾಗಿದ್ದಾನೆ. (ಅದುದರಿಂದ ಎಲ್ಲರೂ ಇಲ್ಲಿಯೇ ಆಶ್ರಯಿಸಬಹುದು; ಅವಶ್ಯವಾಗಿ ನಿಮ್ಮಲ್ಲಿ ಅನುಗ್ರಹವಂಮಾಡುವನೆಂದು ಅವನ ಪರಮೌದಾರ್ಯವನ್ನು ವರ್ಣಿಸಿ ಇರುತ್ತಾರೆ.)

(೪) ಈಶನ್ ವಾನವರ್ಕ್ಕೆನ್ಬನೆನ್ರಾಲ್, ಅದು
ತೇಶಮೋ ತಿರುವೇಙ್ಗಡತ್ತಾನುಕ್ಕು,
ನೀಶನೇನ್ ನಿಱೈವೊನ್ರುಮಿಲೇನ್, ಎನ್ಕಣ್
ಪಾಶಮ್ವೈತ್ತ ಪರಞ್ಜುಡರ್ ಚ್ಚೋದಿಕ್ಕೇ.

ಪ್ರ|| ವಾನವರ್ಕ್ಕು-ನಿತ್ಯಸೂರಿಗಳಿಗೆ, ಈಶನ್-ಸ್ವಾಮಿಯಾದವನು, ಎನ್ಬನ್-ಎನ್ದು ಹೇಳುತ್ತಿರುವೆನು, ಎನ್ರಾಲ್-ಎಂದು ಹೇಳಿದರೆ, ನೀಶನೇನ್-(ನಾನು) ನೀಚನಾಗಿರುವುದರಿಂದ, ನಿಱೈವು-ಗುಣಪೂರ್ತಿಯು, ಒನ್ರುಮಿಲೇನ್-ಯಾವುದೂ ಇಲ್ಲದೆ ಇರುವುದರಿಂದ, ಎನ್ಕಣ್ - ನನ್ನ ಕಡೆಯಲ್ಲಿ, ಪಾಶಮ್ವೈತ್ತ - ಅತ್ಯನ್ತಪ್ರೀತಿಯನ್ನು ಇಟ್ಟಿರುವ, ಪರಞ್ಜುಡರ್-ನಿರತಿಶಯೌಜ್ಜ್ವಲ್ಯವುಳ್ಳ, ಶೋದಿಕ್ಕು ತಿರುವೇಙ್ಗಡತ್ತಾನುಕ್ಕು-ಜ್ಯೋತಿಸ್ಸ್ವರೂಪನಾದ ಶ್ರೀವೇಂಕಟಾಚಲಾಧಿಪತಿಗೆ, ಅದು-(ಆ ನಿತ್ಯಸೂರಿಗಳಿಗೆ ಈಶ್ವರನಾಗಿರೋಣವೆಂಬ) ಅದು, ತೇಶಮೋ-ತೇಜಸ್ಸೋ? (ಯಶಸ್ಕರವೋ?)

( ಸ-ಗಾ-ರ || )—

ದೇವಾಧಿದೇವ ಇತಿ ಚೇದಹಮುದ್ಯ ವಚ್ಮಿ
ಶ್ರೀಶಸ್ಯ ಕಿಂ ತದುಚಿತಂ ಮಹಿಮಾತಿಶೀಮ್ನಃ |
ತೇಜೋನಿಧೇರ್ಮಯಿ ಚ ವೇಙ್ಕಟನಾಯಕಸ್ಯ
ಪ್ರೇಮ್ಣಾಽಪಿ ಮೋಹಿತಮತೇರತಿನೀಚವೃತ್ತೇಃ ||

ತಾ|| ನಾನು ಅತ್ಯನ್ತನೀಚನಾಗಿಯೂ ಗುಣಗಳಿಲ್ಲದವನಾಗಿಯೂ ಇರುವುದರಿಂದ ಇಂತಹ ನನ್ನಲ್ಲಿಕೂಡ ಇಷ್ಟು ಪ್ರೀತಿಯನ್ನು ಇಟ್ಟಿರುವ "ಪರಂಜ್ಯೋತಿಃ"-ಎಂಬ ದಿವ್ಯತೇಜೋಮೂರ್ತಿಯಾದ ಶ್ರೀ ವೇಂಕಟಾದ್ರೀಶ್ವರನಿಗೆ—"ಇವನು ನಿತ್ಯಸೂರಿಗಳಿಗೆಲ್ಲಾ ಅಧಿಪತಿ-ಸರ್ವದೇವಾಧಿದೇವನು"-ಎಂದು ಸ್ತೋತ್ರಮಾಡಿದರೆ-ಏನಾದರೂ ಒಂದು ಅತಿಶಯವುಂಟೋ? (ನೀಚನಾದ ನನ್ನನ್ನು ಪರಿಗ್ರಹಿಸಿದುದರಿಂದಲೇ ಇವನ ಮಾಹಾತ್ಮ್ಯವು ಸರ್ವಾತಿಶಾಯಿಯೆಂದು ಭಾವವು.)

(೫) ಶೋದಿಯಾಹಿ ಯೆಲ್ಲಾವುಲಕುಮ್ ತೊೞುಮ್,
ಆದಿಮೂರ್ತಿ ಯೆನ್ರಾಲಳವಾಕುಮೋ,
ವೇದಿಯರ್ ಮುೞುವೇದತ್ತಮುದತ್ತೈ,
ತ್ತೀದಿಲ್ಶೀರ್ ತ್ತಿರುವೇಙ್ಗಡತ್ತಾನೈಯೇ.

ಪ್ರ॥ ವೇದಿಯರ್-ವೈದಿಕರ, ಮುಳ್ವೇದತ್ತು-ಸಕಲವೇದಗಳಲ್ಲೂ ವಿವರಿಸಲ್ಪಟ್ಟ, ಅಮುದತ್ತೈ-ಭೋಗ್ಯತಾತಿಶಯವುಳ್ಳ, ತೀದಿಲ್-ನಿರ್ದೋಷವಾದ, ಶೀರ್-ಕಲ್ಯಾಣಗುಣಗಳುಳ್ಳ, ತಿರುವೇಙ್ಗಡತ್ತಾನೈ-ಶ್ರೀ ವೇಂಕಟಾದ್ರೀಶ್ವರನನ್ನು, ಶೋದಿಯಾಕಿ-ಉಜ್ಜ್ವಲವಿಗ್ರಹವಿಶಿಷ್ಟನಾದ, ಎಲ್ಲಾ ಉಲಕುಮ್ ತೊಳುಮ್-ಸಕಲಲೋಕಸಂಸೇವ್ಯನಾದ, ಆದಿಮೂರ್ತಿ-ಮೂಲಕಾರಣಭೂತನಾದ ಸರ್ವೇಶ್ವರನು, ಎನ್ರಾಲ್-ಎಂದು ಕರೆದರೆ, ಅಳವಾಕುಮೋ - ಅವನ ಮಹಿಮೆಗೆ ಸಾಕಾಗುವುದೋ ? (ಅದೂ ಅವನ ಮಹಿಮೆಗೆ ಸಾಲದು- ಎಂದು ಭಾವವು.)

( ಸ-ಗಾ-೧ ॥ )---

ಜ್ಯೋತಿರ್ಮಯಂ ಸಕಲಲೋಕಸಮಾಶ್ರಿತಂ ಚಾ-
ಪ್ಯಾದಿಂ ಚ ಸರ್ವಜಗತಾಂ ಯದಿ ವಚ್ಮಿ ಮೂರ್ತಿಮ್ |
ವೇದಾನ್ತಸಾರಮಮೃತಂ ಕಿಮುಹಂ ಸ್ತುವೀಮಿ
ಶ್ರೀ ವೇಙ್ಕಟೇಶಮನಘಂ ಶುಭಸದ್ಗುಣಾಬ್ಧಿಮ್ ||

ತಾ॥ ವೇದವೇದ್ಯನಾಗಿಯೂ ಅಮೃತಪ್ರಾಯನಾಗಿಯೂ ನಿತ್ಯನಿರ್ದೋಷನಾಗಿಯೂ ಸಕಲಕಲ್ಯಾಣಗುಣಾಕರನಾಗಿಯೂ ಇರುವ ಶ್ರೀ ವೇಂಕಟಾದ್ರಿನಾಥನನ್ನು—"ದಿವ್ಯತೇಜೋವಿಶಿಷ್ಟನಾದ ಸಕಲಲೋಕಸಂಸೇವ್ಯನಾದ ಆದಿಮೂರ್ತಿ"—ಎಂದು ಸ್ತೋತ್ರಮಾಡಿದರೆ ಅವನ ಮಹಿಮೆಗೆ ಸಾಕಾಗುವುದೋ ? (ಅಪಾರ ಮಹಿಮನಾದ ಅವನಿಗೆ ಇದು ತಕ್ಕ ಸ್ತೋತ್ರವೇ ಅಲ್ಲವೆಂದು ಭಾವವು.)

(೭) ವೇಙ್ಗಡಙ್ಗಳ್ ಮೆಯ್‌ಮ್ಮೇಲ್ವಿನೈ ಮುಱ್ಱವುಮ್,
ತಾಙ್ಗಳ್ ತಙ್ಗಳ್ಕ್ಕು ನಲ್ಲನವೇ ಶೆಯ್‌ವಾರ್,
ವೇಙ್ಗಡತ್ತುಱೈವಾರ್‌ಕ್ಕು ನಮೋವೆನ್ನಲ್
ಆಙ್ಗಡಮೈ, ಅದು ಶುಮನ್ದಾರ್‌ಕಳ್ಕ್ಕೇ.

ಪ್ರ॥ ವೇಙ್ಗಡತ್ತು ಉಱೈವಾರ್‌ಕ್ಕು-ಶ್ರೀ ವೇಂಕಟಾದ್ರಿಯಲ್ಲಿ ನಿತ್ಯವಾಸ ಮಾಡುವ ಸ್ವಾಮಿಗೆ ತಕ್ಕಂತೆ, ನಮೋವೆನ್ನಲಾಮ್ - ನಮೋವಾಚಕವಾದ, ಅದುಕಡಮೈ - ಆ ಉಕ್ತಿರೂಪವಾದ ವ್ಯಾಪಾರವನ್ನು, ಶುಮನ್ದಾರ್‌ಕಳ್ಕ್ಕೇ-ತಮ್ಮ ಶಿರಸ್ಸಿನಲ್ಲಿ ಧರಿಸಿದವರಿಗೆ, ಕಡಙ್ಗಳ್ - ಋಣರೂಪವಾದ ಪೂರ್ವಾರ್ಜಿತ ಪಾಪಗಳೂ, ಮೇಲ್‌ವಿನೈ-ಉತ್ತರಾಘಗಳೂ ಕೂಡ, ಮುಱ್ಱವುಮ್ ವೇಮ್ - ಸಮ

ಗ್ರವಾಗಿ ದಗ್ಧವಾಗುವುವು ; ಮೆಯ್–ಇದು ಸತ್ಯ. ತಾಙ್ಗಳ್ – (ಆಶ್ರಿತರಾದ) ತಾವುಗಳು, ತಙ್ಗಳ್ಕ್ಕು–ತಮ್ಮ ಸ್ವರೂಪಕ್ಕೆ, ನಲ್ಲನವೇ–ಭೋಗ್ಯವಾದ ಭಗವದನುಭವವನ್ನೇ, ಶೆಯ್‌ವಾರ್ಕಳ್–ಮಾಡುವರು.

( ಸ–ಗಾ–ರ ॥ )—

ಶ್ರೀವೇಙ್ಕಟಾದ್ರಿಪತಯೇ ನಮ ಇತ್ಯಪೀಮಂ
ಮನ್ತ್ರಂ ಚ ಜಪ್ಯಮಿಹ ಬಿಭ್ರತಿ ಯೇ ಮಹಾನ್ತಃ ।
ತೇಷಾಮೃಣಾನಿ ಸಕಲಾನಿ ಹತಾನಿ ಹಿ ಸ್ಯುಃ
ಪಾಪಾನಿ ಚೇತಿ ಕಿಲ ತೇಽತ್ರ ವಿಶುದ್ಧವೃತ್ತಾಃ ॥

ತಾ॥ ಶ್ರೀ ವೇಂಕಟಾದ್ರಿನಾಥನಿಗೆ ನಮಸ್ಕಾರವೆಂಬ (ಶ್ರೀ ವೇಂಕಟಾದ್ರಿಪತಯೇನಮಃ-ಎಂಬ) ಉಕ್ತಿಯನ್ನು (ಮನ್ತ್ರವನ್ನು) ತಮ್ಮ ಶಿರಸ್ಸಿನಲ್ಲಿ ಧರಿಸುವಂತಹ ಮಹನೀಯರಿಗೆ ಸಕಲವಿಧವಾದ ( ಋಣರೂಪವಾದ ) ಪೂರ್ವಪಾಪಗಳೂ, ಉತ್ತರಾಘಗಳೂ ದಗ್ಧವಾಗಿ ನಷ್ಟವಾಗುವು; ಇದು ಯಥಾರ್ಥವು. ಆಶ್ರಿತರಾದ ಅನ್ತಹ ಭಕ್ತರು ತಮ್ಮ ಸ್ವರೂಪಕ್ಕೆ ಅನುಗುಣವಾದ ಭಗವದನುಭವವನ್ನೇ ಮಾಡಿ ಶುದ್ಧವೃತ್ತರಾಗುವರು.

(೭) ಶುಮನ್ದು ಮಾಮಲರ್ ನೀರ್ ಶುಡರ್ ದೂಪಮ್
ಕೊಣ್ಡು,
ಅಮರ್ನ್ದು ವಾನವರ್ ವಾನವರ್ಕೋನೊಡುಮ್,
ನಮನ್ರೆೞುಮ್ ತಿರುವೇಙ್ಗಡಮ್ ನಙ್ಗಳ್ಕ್ಕು
ಶಮನ್ಕೊಳ್ ವೀಡುತರುಮ್ ತಡಙ್ಕುನ್ರಮೇ.

ಪ್ರ॥ ಮಾ–ಶ್ಲಾಘ್ಯವಾದ, ಮಲರ್–ಪುಷ್ಪಗಳನ್ನು, ಮಾ – ಶುದ್ಧವಾದ, ನೀರ್–ಉದಕವನ್ನೂ, ಮಾ–ವಿಲಕ್ಷಣವಾದ, ಶುಡರ್–ದೀಪವನ್ನೂ, ಮಾ ದೂಪಮ್–ಅಗರುಧೂಪವನ್ನೂ, ಶುಮನ್ದು ಕೊಣ್ಡು–ಆದರದೊಡನೆ ವಹಿಸಿಕೊಂಡು, ಅಮರ್ನ್ದು–ಅನನ್ಯಪ್ರಯೋಜನರಾಗಿ ಬಂದುಸೇರಿ, ವಾನವರ್–ನಿತ್ಯಸೂರಿಗಳು, ವಾನವರ್ ಕೋನೊಡುಮ್–ಸೇನಾಧಿಪತಿಯೊಡನೆ, ನಮನ್ರು–ನಮಸ್ಕಾರಮಾಡಿ, ಎೞುಮ್ – ಕೃತಾರ್ಥರಾಗುವಂತೆ, ತಿರುವೇಙ್ಗಡಮ್–ಶ್ರೀ ವೇಂಕಟಾದ್ರಿಯೆಂಬ ನಾಮಧೇಯವುಳ್ಳ, ತಡಮ್ ಕುನ್ರಮ್–ವಿಸ್ತೀರ್ಣವಾದಬೆಟ್ಟವು, ನಙ್ಗಳ್ಕ್ಕು–

ನಮಗೆ, ರಮಃ ಕೊಳ್-ಪರಮಸಾಮ್ಯಾಪತ್ತಿಯನ್ನುಂಟುಮಾಡುವ, ವೀಡು-ಮೋಕ್ಷ ಸುಖವನ್ನು, ತರುಮ್-ತರುವುದು.

( ಸ-ಗಾ-ರ ||)—

ಶ್ಲಾಘ್ಯ ದಿವ್ಯಕುಸುಮಾನಿ ಜಲಂ ಚ ದೀಪಂ
ಧೂಪಂ ಚ ಭಕ್ತಿಭರಿತಾಸ್ಸ್ವ ಭಜನ್ತಿ ದೇವಾಃ |
ಸೂರೀನ್ದ್ರವರ್ಯಸಹಿತಾ ಇಹ ! ವೇಙ್ಕಟಾದ್ರಿ-
ಸ್ಸೋಽಯಂ ದದಾತಿ ಕಿಲ ನಃ ಪರಮಂ ಚ ಸಾಮ್ಯಮ್ ||

ತಾ|| ಶ್ಲಾಘ್ಯವಾದ ಪುಷ್ಪಗಳನ್ನೂ ಪರಿಶುದ್ಧವಾದ ಉದಕವನ್ನೂ ವಿಲಕ್ಷಣವಾದ ಧೂಪದೀಪಾದಿಗಳನ್ನೂ ತೆಗೆದುಕೊಂಡುಬನ್ದು ನಿತ್ಯಸೂರಿಗಳೂಕೂಡ ಸೇನಾಧಿಪತಿ ಸಮೇತರಾಗಿ ಅತ್ಯಾದರದೊಡನೆ ಶ್ರೀ ವೇಂಕಟಾದ್ರೀಶ್ವರನನ್ನು ಆರಾಧಿಸಿ ನಮಸ್ಕರಿಸಿ ಕೃತಾರ್ಥರಾಗುವುದರಿಂದ, ವಿಸ್ತೀರ್ಣವಾದ ಈ ಪರ್ವತವೇ ನಮಗೆ ಪರಮಸಾಮ್ಯವನ್ನುಂಟುಮಾಡುವ ಮೋಕ್ಷವನ್ನು ತರುವುದು. (ಈ ಪರ್ವತವೇ ಪ್ರಾಪ್ತಿಫಲವಾದ ನಿತ್ಯಕೈಂಕರ್ಯವನ್ನುಂಟುಮಾಡುವುದು.)

೭ (೮) ಕುನ್ರಮೇನ್ದಿ ಕ್ಕುಳಿರ್ಮಳೈ ಕಾತ್ತವನ್,
ಅನ್ರು ಞಾಲಮಳನ್ದ ಪಿರಾನ್, ಪರನ್
ಶೆನ್ರು ಶೇರ್ ತಿರುವೇಙ್ಗಡಮಾಮಲೈ,
ಒನ್ರುಮೇ ತೊಳ ನಮ್ವಿನೈ ಯೋಯುಮೇ.

ಪ್ರ ಕುಳಿರ್ಮಳೈ-ಮಹಾಶೀತಳವಾದ ವರ್ಷವನ್ನು (ನಿವಾರಣಮಾಡಲು) ಕುನ್ರಮ್-ಗೋವರ್ಧನಗಿರಿಯನ್ನು, ಏನ್ದಿ-ಧರಿಸಿ, ಕಾತ್ತವನ್ – (ಗೋಗೋಪೀ ಜನರನ್ನು) ರಕ್ಷಿಸಿದವನಾಗಿಯೂ, ಅನ್ರು-(ಮಹಾಬಲಿಯಿಂದ ಆಕ್ರಮಿಸಲ್ಪಟ್ಟಾಗ), ಞಾಲಮ್-ಭೂಮಿಯನ್ನು, ಅಳನ್ದ-ಅಳೆದು ವ್ಯಾಪಿಸಿದ, ಪಿರಾನ್-ಸ್ವಾಮಿಯಾಗಿಯೂ, ಪರನ್-ಪರಮಪೇಷಿಯಾದ ಭಗವನ್ತನು, ಶೆನ್ರು-(ವಾಸಮಾಡಲು) ಹೋಗಿ, ಶೇರ್-ಸೇರಿದ, ತಿರುವೇಙ್ಗಡಮ್-ಶ್ರೀ ವೇಂಕಟಾದ್ರಿಯೆಂಬ, ಮಾಮಲೈ ಒನ್ರುಮೇ-ಮಹಾಪರ್ವತ ಒಂದನ್ನೇ, ತೊಳ-ಅನುಭವಿಸಲು, ನಮ್ವಿನೈ-ನಮ್ಮ ಪಾಪಗಳು, ಓಯುಮೇ-ನಷ್ಟವಾಗುವುವಷ್ಟೆ!

( ಸ–ಗಾ–ರ– ॥ )—

ಉದ್ಧೃತ್ಯ ಚಾದ್ರಿಮಪಿ ರಕ್ಷತಿ ಶೀತವರ್ಷಾ-
ದ್ವಿಕ್ರಾನ್ತಸರ್ವಭುವನಸ್ಸ್ವ ಪರಾತ್ಪರೋಽಸೌ ।
ಸ್ವಾಮೀ ವಿಚಿತ್ಯ ತಮಿಮಂ ಕಿಲ ವೇಙ್ಕಟಾದ್ರಿಂ
ಪ್ರಾಪ್ತೋಽಯಮೇವ ಗಿರಿರಸ್ಮದಘಪ್ರಹನ್ತಾ ॥

ತಾ॥ (ಈ ಪರ್ವತವನ್ನು ಭಜಿಸಿದರೆ ಪ್ರಾಪ್ತಿಪ್ರಬನ್ಧಕವಾದ ನಮ್ಮ ಸಕಲ ಪಾಪಗಳೂ ಸ್ವಯಮೇವ ನಷ್ಟವಾಗುವುವು—ಎಂದು ಹೇಳುತ್ತಾರೆ.) ಮಹಾ ಶೀತಲವರ್ಷವನ್ನು ನಿವಾರಣಮಾಡುವುದಕ್ಕಾಗಿ ಗೋವರ್ಧನಗಿರಿಯನ್ನು ಎತ್ತಿ ಗೋಗೋಪಕುಲವನ್ನೆಲ್ಲಾ ರಕ್ಷಿಸಿದವನಾಗಿಯೂ, ತ್ರಿವಿಕ್ರಮನಾಗಿ ಭೂಮಿಯನ್ನೆಲ್ಲಾ ಆಳಿದವನಾಗಿಯೂ ಇರುವ ಪರಾತ್ಪರನಾದ ಸ್ವಾಮಿಯು ನಿತ್ಯವಾಸ ಮಾಡುವ ಈ ಶ್ರೀವೇಂಕಟಾದ್ರಿಯೆಂಬ ಮಹಾಪರ್ವತವನ್ನು ಭಜಿಸಿದರೆ ನಮ್ಮ ಸಕಲಪಾಪಗಳೂ ನಷ್ಟವಾಗುವುವು—ಎಂಬುದು ಸಿದ್ಧವಷ್ಟೆ.

(೭) ಓಯುಮ್ಮೂಪ್ಪುಪ್ಪಿಱಪ್ಪಿಱಪ್ಪುಪ್ಪಿಣಿ
ವೀಯುಮಾಱುಶೆಯ್ವಾನ್ ತಿರುವೇಙ್ಗಡ-
ತ್ತಾಯನ್, ನಾಣ್ಮಲರಾಮಡಿತ್ತಾಮರೈ,
ವಾಯುಳ್ಳುಮ್ ಮನತ್ತುಳ್ಳುಮ್ ವೈಪ್ಪಾರ್ಗಳ್ಕ್ಕೇ.

ಪ್ರ॥ ನಾಳ್ ಮಲರಾಮ್ – ಸುಕುಮಾರವಾದ, ಅಡಿತ್ತಾಮರೈ – ಪಾದಾರವಿನ್ದಗಳನ್ನು, ವಾಯುಳ್ಳುಮ್—ವಾಕ್ಕಿನಲ್ಲೂ, ಮನತ್ತುಳ್ಳುಮ್—ಮನಸ್ಸಿನಲ್ಲೂ, ವೈಪ್ಪಾರ್ಕಳ್ಕ್ಕು—ಇಡುವವರಿಗೆ, ಓಯುಮ್ – ಬಲಹಾನಿಯನ್ನುಂಟುಮಾಡುವ, ಮೂಪ್ಪು—ಜರೆಯೂ, ಪಿಱಪ್ಪು—ಜನ್ಮವೂ, ಇಱಪ್ಪು—ಮರಣವೂ, ಪಿಣಿ—ವ್ಯಾಧಿಗಳೂ, (ಇವುಗಳಿಲ್ಲವನ್ನೂ) ವೀಯುಮಾಱು—ನಾಶಹೊಂದುವಂತೆ, ಶೆಯ್ವಾನ್—ಮಾಡುವವನು, ತಿರುವೇಙ್ಗಡತ್ತು – ಶ್ರೀ ವೇಂಕಟಾದ್ರಿಯಲ್ಲಿ ವಾಸಮಾಡುವ, ಆಯನ್—ಕೃಷ್ಣನು

( ಸ–ಗಾ–ರ ॥ )—

ನಶ್ಯನ್ತಿ ವಾರ್ಧಕಜರಾದಿ ಜನಿಮೃತೀಶ್ಚ
ಶ್ರೀಶಸ್ಯ ವೇಙ್ಕಟಪತೇಶ್ಚರಣಾರವಿನ್ದಮ್ ।
ಸಂಸಾರತಾಪಹರಣಸ್ಯ ವಹನ್ತಿ ವಾಚಾ
ಚಿತ್ತೇನ ಚಾಪಿ ಕಿಲ ಯೇ ಜಗತೀಹ ತೇಷಾಮ್ ॥

ತಾ॥ ಶ್ರೀ ವೇಂಕಟಾದ್ರಿನಾಥನ ಚರಣಾರವಿನ್ದಯುಗಳವೇ ಸಂಸಾರತಾಪಹರಣವಾದುದರಿಂದ, ವಾಕ್ಕಿನಿಂದಲೂ ಮನಸ್ಸಿನಿಂದಲೂ ಈ ಪಾದಾರವಿನ್ದ ಯುಗಳವನ್ನು ಭಜಿಸಿದವರಿಗೆ ವಾರ್ಧಕ ಜರಾ ಜನ್ಮ ಮರಣಾದಿಗಳೆಲ್ಲವೂ ನಷ್ಟವಾಗುವುವು. ಶ್ರೀ ವೇಂಕಟೇಶ್ವರನಾದ (ಕೃಷ್ಣರೂಪಿಯಾದ) ಭಗವನ್ತನು ಹೀಗೆ ಅನುಗ್ರಹ ಮಾಡುವನೆಂದು ಭಾವವು. (ಈ ಪರ್ವತವನ್ನು ಭಜಿಸಿದವರಿಗೂ ಇಂತಹ ಫಲ ಸಿದ್ಧಿಯೆಂದು ತಾತ್ಪರ್ಯ.)

(೧೦) ವೈತ್ತನಾಳ್ವರೈ ಯೆಲ್ಲೈಕುಱುಕಿ ಚ್ಚೆನ್ಱು,
ಎಯ್ತ್ತಿಳೈಪ್ಪದನ್ಮುನ್ನಮಡೈಮಿನೋ,
ಪೈತ್ತಪಾಮ್ಬಣೈಯಾನ್ ತಿರುವೇಙ್ಗಡಮ್,
ಮೊಯ್ತ್ತ ಶೋಲೈ ಮೊಯ್ಪೂನ್ತಡನ್ತಾಳ್ವರೇ.

ಪ್ರ॥ ಪೈತ್ತ – ವಿಸ್ತೃತವಾದ ಫಣೆಗಳುಳ್ಳ, ಪಾಮ್ಬು – ಆದಿಶೇಷನನ್ನು, ಅಣೈಯಾನ್–ಶಯನವಾಗಿ ಉಳ್ಳ ಸರ್ವೇಶ್ವರನು, ತಿರುವೇಙ್ಗಡಮ್ – ತಿರುಪತಿಯಲ್ಲಿ, ಮೊಯ್ತ್ತ–ಸೇರಿರುವ, ಶೋಲೈ–ವೃಕ್ಷಗಳ, ಮೊಯ್–ರಮ್ಯವಾದ, ಪೂ–ಪುಷ್ಪಗಳುಳ್ಳ, ತಡಮ್–ವಿಶಾಲವಾದ, ತಾಳ್ವರ್–ಸಾನುಪ್ರದೇಶವನ್ನು, ವೈತ್ತ–ನಿಮಗೋಸ್ಕರ ಸಂಕಲ್ಪಿಸಿ ಇಟ್ಟ, ನಾಳ್–ದಿವಸದ, ವರೈ–ಅವಧಿಯಾದ, ಎಲ್ಲೈ–ಮೊದಲು ಎಲ್ಲೆಯು, ಕುಱುಕಿ–(ನಿಮ್ಮನ್ನು) ಸಮೀಪಿಸಿ, ಎಯ್ತ್ತು–(ಕರಣಗಳಿಗೆ) ಬಲಹಾನಿಯುಂಟಾಗಿ, ಇಳೈಪ್ಪದನ್ಮುನ್ನಮ್ – ಮನಸ್ಸು ಶಿಥಿಲವಾಗುವುದಕ್ಕೆ ಮುಂಚೆ, ಶೆನ್ಱು–ಹೋಗಿ, ಅಡೈಮಿನ್–ಆಶ್ರಯಿಸಿರಿ.

( ಸ–ಗಾ–ರ ॥ )—

ಕಷ್ಟೇಷು ಹನ್ತ ! ದಿವಸೇಷ್ವವಸಾನಕಾಲೇ
ಸರ್ವೇನ್ದ್ರಿಯಪ್ರಳಯತಶ್ಚ ಪುರಾ ಭಜಧ್ವಮ್ ।
ಶ್ರೀಶೇಷಶಾಯಿವರವೇಙ್ಕಟಸಾನುದೇಶಂ
ರಮ್ಯೈರ್ವಿಶಾಲಮಿಹ ವೃಕ್ಷಗಣೈಃ ಪ್ರಸೂನೈಃ ॥

ತಾ॥ (ನಿರತಿಶಯಭೋಗ್ಯವಾದ ಈ ಪರ್ವತವನ್ನೇ ಎಲ್ಲರೂ ಈಗಲೇ ಭಜಿಸಿರಿ—ಎಂದು ಉಪದೇಶಿಸುತ್ತಾರೆ.) ಶ್ರೀ ಶೇಷಶಾಯಿಯಾದ ಸರ್ವೇಶ್ವರನು ನಿತ್ಯವಾಸಮಾಡುತ್ತಿರುವ ಈ ಶ್ರೀ ವೇಂಕಟಾದ್ರಿಯ ದಿವ್ಯಕುಸುಮಭರಿತವಾದ ಸಾನುಪ್ರದೇಶವನ್ನು ನೀವುಗಳೆಲ್ಲರೂ ನಿಮ್ಮ ಆಯುಃಪರಿಮಿತಿಯ ಅನ್ತ್ಯಕಾಲವು

ಬರುವುದಕ್ಕೆ ಮುಂಚೆಯೇ (ಸಕಲೇನ್ದ್ರಿಯ ಶೈಥಿಲ್ಯವುಂಟಾಗುವುದಕ್ಕೆ ಮುಂಚೆಯೇ) ಹೋಗಿ ಭಜಿಸಿರಿ. (ಇದೇ ಸಕಲರಿಗೂ ಉಜ್ಜೀವನ ಸಾಧನವೆಂದು ಭಾವವು.)

(೧೧) ತಾಳ್‌ಪರಪ್ಪಿ ಮಣ್‌ತಾವಿಯ ವೀಶನ್ನೈ,
ನೀಳ್‌ಪೊಳ್ಳಿಲ್ ಕುರುಕೂರ್ ಚ್ಚಡಕೋಪನ್ ಶೊಲ್,
ಕೇಳ್ಳಿಲಾಯಿರತ್ತಿಪ್ಪತ್ತುಮ್ ವಲ್ಲವರ್,
ವಾಳ್ವಾರ್ ವಾಳ್ವೆಯ್‌ದಿ ಞಾಲಮ್ ಪುಕಳ್ಳವೇ.

ಪ್ರ॥ ತಾಳ್-ಪಾದಗಳನ್ನು, ಪರಪ್ಪಿ-ವಿಸ್ತರಿಸಿ, ಮಣ್ - ಭೂಮಿಯನ್ನು, ತಾವಿಯ-ಅಳೆದುಕೊಂಡ, ಈಶನ್ನೈ - ಸರ್ವೇಶ್ವರನನ್ನು, ನೀಳ್-ಉನ್ನತವಾದ, ಪೊಳ್ಳಿಲ್-ವೃಕ್ಷಷಂಡಗಳುಳ್ಳ, ಕುರುಕೂರ್ - ಶ್ರೀ ಕುರುಕಾಪುರಿಗೆ ನಿರ್ವಾಹಕರಾದ, ಶಡಕೋಪ್ಪನ್-ನಮ್ಮಾಳ್ವಾರ್ರು, ಶೊಲ್-ಹೇಳಿದ (ರಚಿಸಿದ), ಕೇಳ್ಳ ಇಲ್-ಅಸದೃಶವಾದ, ಆಯಿರತ್ತು - ಸಹಸ್ರಪದ್ಯಮಾಲೆಯೊಳು, ಇಪ್ಪತ್ತುಮ್ - ಈ ದಶಕವನ್ನು, ವಲ್ಲವರ್ - ತಿಳಿದವರು, ವಾಳ್ವು - ಕೈಂಕರ್ಯಸಾಮ್ರಾಜ್ಯವನ್ನು, ಎಯ್‌ದಿ-ಹೊಂದಿ, ಞಾಲಮ್ - ಲೋಕವೆಲ್ಲಾ, ಪುಕಳ್ಳ - ಸ್ತೋತ್ರಮಾಡುವಂತೆ, ವಾಳ್ವಾರ್-ಬಾಳುವರು.

( ಸಂಗ್ರ॥ )—

ವಿಸ್ತೀರ್ಯ ಪಾದತಲಮಸ್ಯವನೀಂ ಪ್ರಮಾತು-
ಶ್ರೀವೇಙ್ಕಟಾಚಲಪತೇಶ್ಶಠಕೋಪನಾಮ್ನಾ ।
ಸ್ತೋತ್ರಾ ಕೃತೇ ವಿದುರಿದಂ ದಶಕಂ ಸಹಸ್ರೇ
ಯೇ ತೇ ತು ಯಾನ್ತಿ ಪದವೀಂ ಭುವನಪ್ರಶಸ್ತಾಮ್॥

ತಾ॥ (ಈ ದಶಕದ ಪಠನಫಲವನ್ನು ಸೂಚಿಸುತ್ತಾರೆ.) ಸಕಲ ಲೋಕಗಳೂ ಉಜ್ಜೀವಿಸುವಂತೆ ತನ್ನ ಪಾದಗಳನ್ನು ವಿಸ್ತರಿಸಿ ಪ್ರಪಂಚವನ್ನೆಲ್ಲಾ ಅಳೆದ ಸರ್ವೇಶ್ವರನಾದ ಶ್ರೀ ವೇಂಕಟಾಚಲಪತಿಯನ್ನು ಸ್ತೋತ್ರಮಾಡುವುದಕ್ಕಾಗಿ ಶ್ರೀ ಶಠಾರಿಮುನಿವರ್ಯರು ರಚಿಸಿದ ಸಹಸ್ರಪದ್ಯಮಾಲೆಯೊಳು ಈ ದಶಕವನ್ನು ಬಲ್ಲವರು ಭುವನಪ್ರಶಸ್ತವಾದ ಕೈಂಕರ್ಯಸಾಮ್ರಾಜ್ಯವಂ ಪಡೆದು ಬಾಳುವರು.

( ದ್ರ–ಉ–ಸಂ || )—

ಸರ್ವತ್ರ ಸರ್ವಸಮಯೇ ಸಕಲಾಸ್ವವಸ್ಥಾ-
ಸ್ವಾಭ್ಯರ್ಥಯನ್ ನಿಖಿಲದಾಸ್ಯರಸಾನ್ಮುನೀನ್ದ್ರಃ |
ಶ್ರೀವೇಙ್ಕಟಾದ್ರಿನಿಲಯಸ್ಯ ಪರಸ್ಯ ಪುಂಸೋ
ನಿಸ್ಸೀಮಶೀಲಗುಣಮಪ್ಯವದತ್ತೃತೀಯೇ ||

( ದ್ರ–ಉ–ತಾ–ರ || )—

ಸ್ಥಾನೋತ್ಕರ್ಷಾತ್ಸುದೀಪ್ತಂ ಶ್ರಮಹರವಪುಷಂ ಸ್ವಾಙ್ಗಪರ್ಯಾಪ್ತಭೂಷಂ
ತೇಜಿಷ್ಠಸ್ನೀಚಯೋಗಾತ್ ಪ್ರಣಮಿತಭುವನಂ ಪಾವನಂ ಸನ್ನತಾನಾಮ್ |
ಪ್ರಾಪ್ತ್ಯರ್ಹಸ್ಥಾನಮಂಹಃಪ್ರಶಮನವಿಷಯಂ ಬನ್ಧವಿಚ್ಛೇದಿಪಾದಂ
ಭೇಜೇ ಶೀಘ್ರಾಭಿಯಾನಕ್ಷಮಶುಭವಸತಿಂ ಲಮ್ಭಿತಾರ್ಚಾಭಿಮುಖ್ಯಮ್ ||

(ಈ ತೃತೀಯದಶಕದ ಸಾರಾಂಶ)—

ಈ ಮೂರನೆಯ ದಶಕದಲ್ಲಿ ಶ್ರೀ ಶಠಾರಿಮುನಿವರ್ಯರು ಸರ್ವದೇಶ ಸರ್ವಕಾಲ ಸರ್ವಾವಸ್ಥೆಗಳಲ್ಲೂ ಸಕಲವಿಧ ಕೈಂಕರ್ಯಗಳನ್ನೂ ಶ್ರೀ ವೇಂಕಟಾಚಲಪತಿಯ ಚರಣಾರವಿನ್ದಯುಗಳದಲ್ಲೇ ಮಾಡಬೇಕೆಂದು ಪ್ರಾರ್ಥಿಸಿ, ನಿತ್ಯಸೂರಿಗಳೂ ಕೂಡ ಇಲ್ಲಿಯೇ ಬಂದು ಸೇವಿಸುತ್ತಿರುವುದರಿಂದ ಎಲ್ಲರೂ ಈ ಪರ್ವತದ ಸಾನುಪ್ರದೇಶವನ್ನೇ ಭಜಿಸಿ ಕೃತಾರ್ಥರಾಗಿರಿ ಎಂದು ಉಪದೇಶಿಸಿ ಇರುತ್ತಾರೆ.

—:o:—

ಶ್ರೀಃ

# ತೃತೀಯಶತಕದಲ್ಲಿ—ಚತುರ್ಥದಶಕ.

## (ಪುಕ್ಕುನಲ್ಲೊರುವ೯)—

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಪೂರ್ವೋಕ್ತವಾದ ಕೈಂಕರ್ಯವನ್ನು ಮಾಡಲು ಅಶಕ್ತರಾಗಿ ವಾಚಿಕಕೈಂಕರ್ಯವನ್ನೇ ಮಾಡುತ್ತಾರೆ.)

---

(೧) ಪುಕ್ಕುನಲ್ಲೊರುವನೆನ್ಗೋ ಪೊರುವಿಲ್ ಶೀರ್
ಪ್ಪೂಮಿಯೆನ್ಗೋ,
ತಿಕ್ಕುಮ್ ತಣ್ ಪರವೈಯೆನ್ಗೋ ತೀಯೆನ್ಗೋ
ವಾಯುವೆನ್ಗೋ,
ನಿಕ್ಕುಮಾಕಾಶಮೆನ್ಗೋ ನೀಳ್ ಶುಡರಿರಣ್ಡುಮೆನ್ಗೋ,
ಇಕ್ಕ್ವೊಲಿವ್ವನೈತ್ತುಮೆನ್ಗೋ ಕಣ್ಣನೈ ಕ್ಕೂವುಮಾಱೇ.

ಪ್ರ॥ ಕಣ್ಣನೈ–ಕೃಷ್ಣನನ್ನು, ಕೂವುಮಾಱು–ಸ್ತೋತ್ರಮಾಡುವಪ್ರಕಾರವು. ಪುಕ್ಕುಮ್–(ವೇದಗಳಿಂದಲೂ ವೈದಿಕರಿಂದಲೂ) ಸ್ತೋತ್ರಮಾಡಲ್ಪಟ್ಟ, ನಲ್–ವಿಲಕ್ಷಣಗುಣವಿಗ್ರಹವಿಭೂತಿಯುಕ್ತನಾದ, ಒರುವ೯–ಅದ್ವಿತೀಯನು, ಎನ್ಗೋ–ಎಂದು ಹೇಳುವೆನೋ? ಪೊರುವು ಇಲ್–ಸಮಾನವಿಲ್ಲದ, ಶೀರ್–ಗುಣಪೂರ್ತಿಯುಳ್ಳ, ಪೂಮಿಯೆನ್ಗೋ–ಭೂಮಿಯೆಂದು ಹೇಳುವೆನೋ? ತಿಕ್ಕುಮ್–ಪ್ರಕಾಶಿಸುವ, ತಣ್–ಶೀತಳವಾದ, ಪರವೈಯೆನ್ಗೋ–ನೀರು ಎಂದು ಹೇಳುವೆನೋ? ತೀಯೆನ್ಗೋ–ಅಗ್ನಿಯೆಂದು ಹೇಳುವೆನೋ? ವಾಯುವೆನ್ಗೋ–ವಾಯುವೆಂದು ಹೇಳುವೆನೋ? ನಿಕ್ಕುಮ್–ಸಮೀಪದಲ್ಲಿರುವ, ಆಕಾಶಮೆನ್ಗೋ–ಆಕಾಶವೆಂದು ಹೇಳುವೆನೋ? ನೀಳ್–(ಕಿರಣಗಳಿಂದ) ಸರ್ವತ್ರಪ್ರಕಾಶಿಸುವ, ಶುಡರ್ ಇರಣ್ಡುಮೆನ್ಗೋ–ಚನ್ದ್ರಾದಿತ್ಯರೆಂಬ ಎರಡು ತೇಜೋದ್ರವ್ಯಗಳೆಂದು ಹೇಳುವೆನೋ? ಇಕ್ಕ್ವಿಲ್–ಒಂದನ್ನೂ ಬಿಡದೆ, ಇವ್ವನೈತ್ತುಮೆನ್ಗೋ–ಇವು ಎಲ್ಲವೂ ಎಂದು ಹೇಳುವೆನೋ?

( ಸ-ಗಾ-ರ || )—

**ಸ್ತುವ್ಯೋಽಯಂ ಪರಮೋಽದ್ವಿತೀಯ ಇತಿ ಕಿಂ ವಚ್ಮಿ ? ಸ್ವಯಂ ಧಾರಿಣೀ**
**ಸೇಯಂ ನಿಸ್ಸಮವೈಭವೇತಿ ಕಿಮಹೋ ! ವಾರಾನ್ನಿಧಿಶ್ಶೀತಲಃ |**
**ಕಿಂ ವಾಽಯಂ ದಹನೋಽನಿಲಃ ? ಕಿಮು ನಭಸ್ಸರ್ವತ್ರಗಂ ? ಕಿಂ ದಿವಿ**
**ಜ್ಯೋತಿರ್ದ್ವನ್ದ್ವಮುತಾಖಿಲಂ ಚ ತದಿದಂ ಕಿಂ ವೇತಿ ಕೃಷ್ಣಂ ಬ್ರುವೇ?||**

ತಾ|| (ಶ್ರೀ ಭಗವದ್ಗುಣಾನುಭವವನ್ನು ಮಾಡಲುಪಕ್ರಮಿಸಿ ಅವನ ಶರೀರಾವಯವರೂಪವಾದ ಪಂಚಭೂತಗಳೊಡನೆಯೂ ಭೌತಿಕವಸ್ತುಗಳೊಡನೆಯೂ ಸೇರಿಸಿ ಅಭೇದಾನುಸನ್ಧಾನವಂ ಮಾಡುತ್ತಾರೆ.) ಶ್ರೀಕೃಷ್ಣನನ್ನು ಸ್ತೋತ್ರಮಾಡುವಪ್ರಕಾರವು ಈದೃಶವಾಗಿರುವುದು. ಸಕಲ ವೇದವೇದ್ಯನಾದ ದಿವ್ಯವಿಗ್ರಹವಿಶಿಷ್ಟನಾದ ಅದ್ವಿತೀಯನು ಎಂದು ಹೇಳಲೇ? ಅಥವಾ ಅಸದೃಶಗುಣಪೂರ್ಣವಾದ ಪೃಥಿವ್ಯಪ್ತೇಜೋವಾಯ್ವಾಕಾಶಗಳಲ್ಲಿ ಒಂದೊಂದೂ ಎಂದು ಹೇಳಲೇ ? ಚನ್ದ್ರಾದಿತ್ಯರೆಂದು ಹೇಳಲೇ ? ಇವೆಲ್ಲವೂ ಎಂದು ಹೇಳಲೇ ? ಏನೆಂದು ವರ್ಣಿಸಲಿ ? (ಇವುಗಳಿಗೆಲ್ಲಾ ಅನ್ತರಾತ್ಮನು ಇವನೇ—ಎಂದು ತಾತ್ಪರ್ಯ)

(೨) ಕೂವುಮಾಱಱಿಯಮಾಟ್ಟೇನ್ ಕುನ್ಱಙ್ಗಳನೈತ್ತುಮೆನ್ಗೋ,
ಮೇವು ಶೀರ್ ಮಾರಿಯೆನ್ಗೋ, ವಿಳಙ್ಗು ತಾರಕೈಕಳೆನ್ಗೋ,
ನಾವಿಯಲ್ ಕಲೈಕಳೆನ್ಗೋ ಞಾನನಲ್ಲಾವಿಯೆನ್ಗೋ,
ಪಾವುಶೀರ್ ಕ್ಕಣ್ಣನೆಮ್ಮಾನ್ ಪಙ್ಗಯಕ್ಕಣ್ಣನೈಯೇ

ಪ್ರ|| ಕುನ್ಱಙ್ಗಳ್ ಅನೈತ್ತುಮ್ ಎನ್ಗೋ-(ಭೂಮಿಕಾರ್ಯವಾದ) ಪರ್ವತಗಳೆಲ್ಲಾ ಎಂದು ಹೇಳುವೆನೋ? ಮೇವು ಶೀರ್-ಸಕಲಜೀವನಗುಣೋತ್ಕರ್ಷವುಳ್ಳ ಮಾರಿಯೆನ್ಗೋ-(ಜಲಕಾರ್ಯವಾದ) ಮಳೆಯೆಂದು ಹೇಳುವೆನೋ ? ವಿಳಙ್ಗು - ಪ್ರಕಾಶಿಸುವ, ತಾರಕೈಕಳೆನ್ಗೋ-(ತೇಜಃಕಾರ್ಯವಾದ) ನಕ್ಷತ್ರಾದಿಗಳೆಂದು ಹೇಳುವೆನೋ ? ನಾವಿಯಲ್-ನಾಲಿಗೆಯಲ್ಲಿ ಸೇರುವ, ಕಲೈಕಳೆನ್ಗೋ-(ವಾಯುಕಾರ್ಯವಾದ) ವಿದ್ಯಾಸ್ಥಾನಗಳೆಂದು ಹೇಳುವೆನೋ ? ಞಾನಮ್ - ಅರ್ಥಜ್ಞಾನಕ್ಕೆ, ನಲ್ಲಾವಿಯೆನ್ಗೋ-ಶರೀರವಾದ (ಆಕಾಶಕಾರ್ಯವಾದ) ಶಬ್ದವಿಶೇಷಗಳೆಂದು ಹೇಳುವೆನೋ ? ಪಾವು-ವಿಸ್ತೃತವಾದ, ಶೀರ್-ಗುಣವಿಭೂತಿಗಳುಳ್ಳ, ಕಣ್ಣನ್-(ನನಗೆ ಸುಲಭನಾದ) ಕೃಷ್ಣರೂಪಿಯಾದ, ಪಙ್ಗಯಕ್ಕಣ್ಣನೈ- ತಾವರೆಹೂವಿನಂತೆ ಕಣ್ಣುಗಳುಳ್ಳ, ಎಮ್ಮಾನ್-ನನ್ನ ಸ್ವಾಮಿಯನ್ನು, ಕೂವುಮಾಱು-ವರ್ಣಿಸುವಪ್ರಕಾರವನ್ನು, ಅಱಿಯಮಾಟ್ಟೇನ್-ತಿಳಿಯಲಾರೆನು.

( ಸ–ಗಾ–ರ ॥ )—

**ಸ್ತೋತುಂ ನೈವ ಹಿ ಶಕ್ನುಯಾಂ ಮಮ ವಿಭುಂ ಕೃಷ್ಣಂ ಸರೋಜಾಕ್ಷಕಂ!**
**ಕಿಂ ವಾಽಮೀ ಗಿರಯಃ ? ಕಿಮೇತದಖಿಲಂ ವರ್ಷಂ ಚ ಸಜ್ಜೀವನಮ್ ? |**
**ಭಾಸ್ವತ್ತಾರಕಮಾಲಿಕಾ ಕಿಮಥವಾ ವೇದ್ಯಾಃ ಕಲಾಶ್ಚಾಖಿಲಾಃ ?**
**ಕಿಂ ಜ್ಞಾನಾಶ್ರಯಶಬ್ದರಾಶಿರಥವಾ ನೈವಾಸ್ಮಿ ವಕ್ತುಂ ಪ್ರಭುಃ ||**

ತಾ॥ (ಮಹಾಭೂತಗಳ ಕಾರ್ಯವಿಶೇಷವನ್ನು ಹೇಳುತ್ತಾರೆ.) ಕಾಠಿನ್ಯದಿಂದ ಭೂಮಿಕಾರ್ಯವಾದ ಪರ್ವತಗಳು—ಎಂದು ಹೇಳಲೇ, ಸಕಲಾತ್ಮಜೀವನ ಗುಣೋತ್ಕರ್ಷವುಳ್ಳ ಜಲಕಾರ್ಯವಾದ ಮಳೆಯೆನ್ನಲೇ, ತೇಜಃಕಾರ್ಯವಾದ ನಕ್ಷತ್ರಗಳು-ಎನ್ನಲೇ, ಜಿಹ್ವಾಸ್ಥಾನವರ್ತಿಯಾಗಿ ವಾಯುಕಾರ್ಯವಾದ ವಿದ್ಯಾವಿಭಾಗಗಳೆನ್ನಲೇ, ಅರ್ಥಜ್ಞಾನೋಪಕಾರಕವಾದ ಆಕಾಶಕಾರ್ಯವಾದ ಶಬ್ದವಿಶೇಷಗಳು—ಎನ್ನಲೇ, ಅಪಾರ ಗುಣವಿಭೂತಿವಿಶಿಷ್ಟನಾಗಿ ಪದ್ಮಾಕ್ಷನಾಗಿರುವ ನನ್ನ ಶ್ರೀ ಕೃಷ್ಣನನ್ನು ನಾನು ಏನೆಂದು ವರ್ಣಿಸಬೇಕೋ ತಿಳಿಯಲಾರೆನು. (ಪರ್ವತ-ವರ್ಷ-ನಕ್ಷತ್ರ-ವಿದ್ಯಾಸ್ಥಾನ-ಶಬ್ದ-ತದರ್ಥಾದಿ ಸಕಲಪದಾರ್ಥಗಳಿಗೂ ಇವನೇ ಆತ್ಮಭೂತನೆಂದು ಭಾವವು.)

(೩) ಪಙ್ಗಯಕ್ಕಣ್ಣನೆನ್ಗೋ ಪವಳಚ್ಚೆವ್ವಾಯನೆನ್ಗೋ,
ಅಙ್ಗದಿರಡಿಯನೆನ್ಗೋ ಅಞ್ಜನವಣ್ಣನೆನ್ಗೋ,
ಶೆಙ್ಗದಿರ್ಮುಡಿಯನೆನ್ಗೋ ತಿರುಮಱುಮಾರ್ಬನೆನ್ಗೋ,
ಶಙ್ಗುಶಕ್ಕರತ್ತನೆನ್ಗೋ ಶಾದಿಮಾಣಿಕ್ಕತ್ತೈಯೇ.

ಪ್ರ॥ ಶಾದಿಮಾಣಿಕ್ಕತ್ತೈ–ಆಕರಜವಾದ ಮಾಣಿಕ್ಯದಂತೆ ಪ್ರಕಾಶಮಾನವಾದ ವಿಗ್ರಹವುಳ್ಳವನನ್ನು, ಪಙ್ಗಯಕ್ಕಣ್ಣನೆನ್ಗೋ – ಪದ್ಮಾಕ್ಷನೆಂದು ಹೇಳುವೆನೋ? ಪವಳಚ್ಚೆವ್ವಾಯನೆನ್ಗೋ–ಹವಳದಂತೆ ಕೆಂಪಾಗಿರುವ ಬಾಯಿಯುಳ್ಳವನೆಂದು ಹೇಳುವೆನೋ? ಅಮ್‌ಕದಿರ್ ಅಡಿಯನೆನ್ಗೋ–ರಮ್ಯವಾದ ಕಾನ್ತಿಯುಳ್ಳ ಪಾದಗಳುಳ್ಳವನೆಂದು ಹೇಳುವೆನೋ? ಅಞ್ಜನವಣ್ಣನೆನ್ಗೋ – ಅಞ್ಜನದಂತೆ (ಕಾಡಿಗೆಯಂತೆ) ಬಣ್ಣವುಳ್ಳವನೆಂದು ಹೇಳುವೆನೋ? ಶೆಮ್‌ಕದಿರ್ ಮುಡಿಯನೆನ್ಗೋ–ಕೆಂಪಾದ ಪ್ರಭೆಯುಳ್ಳ ಕಿರೀಟವನ್ನು ಧರಿಸಿರುವವನೆಂದು ಹೇಳುವೆನೋ? ತಿರು–ಶ್ರೀವತ್ಸವೆಂಬ ಲಕ್ಷ್ಮೀಸ್ಥಾನವಾದ, ಮಱು–ಚಿಹ್ನವುಳ್ಳ, ಮಾರ್ಬನೆನ್ಗೋ–ವಕ್ಷಸ್ಥಲವುಳ್ಳವನೆಂದು ಹೇಳುವೆನೋ? ಶಙ್ಗುಶಕ್ಕರತ್ತನೆನ್ಗೋ – ಶಂಖಚಕ್ರಧಾರಿಯೆಂದು ಹೇಳುವೆನೋ?

( ಸ-ಗಾ-ರ ॥ )—

ಕಿಂ ವಾಽಯಂ ವರಪುಣ್ಡರೀಕನಯನಃ? ಕಿಂ ವಾ ಪ್ರವಾಳಾಧರಃ?
ಕಿಂ ವಾ ರಮ್ಯಲಸತ್ಪದಾಮ್ಬುಜಯುಗಃ ? ಕಿಂ ನೀಲವರ್ಣೋಽಚ್ಯುತಃ? |
ಕಿಂ ವಾ ಉತ್ಕಟಜ್ಜ್ವಲದಿವ್ಯಮೌಳಿರುರಸಿ ಶ್ರೀವತ್ಸಚಿಹ್ನಾಙ್ಕಿತಃ ? |
ಕಿಂ ಮಾಣಿಕ್ಯಮಿದಂ ವದಾಮಿ ವಿಮಲಂ ಶ್ರೀಶಙ್ಖಚಕ್ರೋಜ್ಜ್ವಲಮ್ ॥

ತಾ॥ (ಜಗಚ್ಛರೀರಕನಾದ ಇವನ ಅಸಾಧಾರಣ ದಿವ್ಯವಿಗ್ರಹದ ವರ್ಣನವಂ ಮಾಡುತ್ತಾರೆ.) ಮಾಣಿಕ್ಯವರ್ಣನಾದ ಪರಮಾತ್ಮನನ್ನು ನಾನು ಪದ್ಮಾಕ್ಷನೆನ್ನಲೋ, ಪ್ರವಾಳವಕ್ತ್ರನೆನ್ನಲೋ, ವಿಲಸತ್ಪಾದಯುಗ್ಮನೆನ್ನಲೋ, ಅಞ್ಜನವರ್ಣನೆನ್ನಲೋ, ವಿಲಸತ್ಕಿರೀಟಧಾರಿಯೆನ್ನಲೋ, ಶ್ರೀವತ್ಸವಕ್ಷಸ್ಥಲನೆನ್ನಲೋ, ಶಂಖಚಕ್ರಧಾರಿಯೆನ್ನಲೋ? (ಏನೆಂದು ವರ್ಣಿಸಲಿ ?)

(೪) ಶಾದಿಮಾಣಿಕ್ಕಮೆನ್ಗೋ ಶವಿಕೊಳ್ ಪೊನ್ಮುತ್ತಮೆನ್ಗೋ,
ಶಾದಿನಲ್ವಯಿರಮೆನ್ಗೋ, ತವಿವಿಲ್ ಶೀರ್ವಿಳಕ್ಕಮೆನ್ಗೋ,
ಆದಿಯಂಶೋದಿಯೆನ್ಗೋ, ಆದಿಯಮ್ಪುರುಡನೆನ್ಗೋ,
ಅದುಮಿಲ್ ಕಾಲತ್ತೆನ್ದೈ ಯಚ್ಚುದನಮಲನೈಯೇ.

ಪ್ರ॥ ಅದುಮ್ ಇಲ್ – ಒಂದೂ ಇಲ್ಲದ, ಕಾಲತ್ತು – ಸಂಹಾರಕಾಲದಲ್ಲಿ, ಎನ್ದೈ–ಅವಿಭಕ್ತನಾಮರೂಪನಾಗಿದ್ದು ನಮಗೆ ಸ್ವಾಮಿಯಾಗಿಯೂ, ಅಚ್ಚುದನ್– ಸ್ವರೂಪಾದಿ ಪ್ರಚ್ಯುತಿಯಿಲ್ಲದವನಾಗಿಯೂ, ಅಮಲನ್–ನಿತ್ಯಪರಿಶುದ್ಧನಾಗಿಯೂ ಇರುವವನನ್ನು, ಶಾದಿಮಾಣಿಕ್ಕಮೆನ್ಗೋ–ಆಕರಜವಾದ ಜಾತಿಮಾಣಿಕ್ಯವೆಂದು ಹೇಳುವೆನೋ? ಶವಿಕೊಳ್–ಪ್ರಕಾಶವುಳ್ಳ, ಪೊಮುತ್ತಮೆನ್ಗೋ – ಹೊನ್ನು ಮುತ್ತುಗಳೂ ಎಂದು ಹೇಳುವೆನೋ? ಶಾದಿನಲ್ವಯಿರಮೆನ್ಗೋ–ಆಕರಜವಾಗಿ ವಿಲಕ್ಷಣವಾದ ವಜ್ರವೆಂದು ಹೇಳುವೆನೋ? ತವಿವು ಇಲ್ ಶೀರ್–ವಿಚ್ಛೇದವಿಲ್ಲದೆ ಪ್ರಕಾಶಿಸುವ, ವಿಳಕ್ಕಮೆನ್ಗೋ–ದೀಪವೆಂದು ಹೇಳುವೆನೋ? ಆದಿ ಅಮ್ ಶೋದಿಯೆನ್ಗೋ – ಪ್ರಥಮಭಾವಿಯಾದ ಸುನ್ದರಜ್ಯೋತೀರೂಪನೆಂದು ಹೇಳುವೆನೋ? ಆದಿ ಅಮ್ ಪುರುಡನೆನ್ಗೋ–ಆದಿಯಾಗಿ (ಅನನ್ತಾದಿ)ಕಲ್ಯಾಣಗುಣವಿಶಿಷ್ಟನಾದ ಪರಮಪುರುಷನೆಂದು ಹೇಳಲೇ? (ಏನೆಂದು ವರ್ಣಿಸಲಿ?)

( ಸ-ಗಾ-ರ || )—

ಕಿಂ ಮಾಣಿಕ್ಯಮಹೋ! ವದಾಮಿ? ಕಿಮಹೋ! ಭಾಸ್ವತ್ಸುವರ್ಣಂ ಚ ತಂ?
ಮುಕ್ತಾರಾಶಿಮುತ ಬ್ರವೀಮಿ? ವಿಮಲಂ ವಜ್ರಂ? ಪ್ರದೀಪಂ ಶುಭಮ್? |
ಆದ್ಯಂ ಜ್ಯೋತಿರುದಾಹರಾಮಿ ಪುರುಷಂ ಕಿಂ ವಾ ಪುರಾಣಂ ಪರಂ?
ಮನ್ಮಾಥಂ ಹರಿಮಚ್ಯುತಂ ತಮಮಲಂ ಸಂಹಾರಕಾಲಸ್ಥಿತಮ್? ||

ತಾ|| (ಉಜ್ಜ್ವಲವಾದ ಮಾಣಿಕ್ಯಾದಿ ಪದಾರ್ಥಗಳು ಅವನ ವಿಭೂತಿಯಲ್ಲಿ ಅನ್ತರ್ಗತವೆಂದು ಅವುಗಳೊಡನೆ ಅಭೇದವಂ ಹೇಳುತ್ತಾರೆ.) ಸಂಹಾರಕಾಲ ದಲ್ಲೂ ಕೂಡ ನಮಗೆ ಸ್ವಾಮಿಯಾಗಿಯೂ ಅಚ್ಯುತನಾಗಿಯೂ ನಿತ್ಯಪರಿಶುದ್ಧ ನಾಗಿಯೂ ಇರುವ ಭಗವಂತನನ್ನು ಜಾತಿಮಾಣಿಕ್ಯವೆನ್ನಲೋ, ಉಜ್ಜ್ವಲ ಸುವರ್ಣ ಮುಕ್ತಾಫಲಗಳೆನ್ನಲೋ, ಉತ್ಕೃಷ್ಟವಾದ ವಜ್ರವೆನ್ನಲೋ, ಅವಿಚ್ಛಿನ್ನವಾಗಿ ಪ್ರಕಾಶಿಸುವ ದೀಪವೆನ್ನಲೋ, ಆದಿಮ ಸುನ್ದರ ಜ್ಯೋತಿಸ್ಸೆನ್ನಲೋ, ಆದಿ-ಶ್ರೀಮತ್-ಪರಮಪುರುಷನೆನ್ನಲೋ?–ಏನೆಂದು ವರ್ಣಿಸಲಿ? (ಪರಮಪದದಲ್ಲಿರುವ ಪರಂಜ್ಯೋತಿಃ' ಎಂಬ ಪರಾತ್ಪರವಸ್ತುವು ಈಪ್ರಕಾರ ದಿವ್ಯಕಾನ್ತಿಯುಕ್ತವಾ 'ದುದೆಂದು ಭಾವವು.)

(೨೧) ಅಚ್ಚುದನಮಲನೆನ್ಗೋ ವಡಿಯವರ್ ವಿನೈ ಕೆಡುಕ್ಕುಮ್,
ನಚ್ಚುಮಾಮರುನ್ದಮೆನ್ಗೋ ನಲಂಕಡಲಮುದಮೆನ್ಗೋ,
ಅಚ್ಚುವೈಕ್ಕಟ್ಟಿಯೆನ್ಗೋ ಅಱುಶುವೈ ಯಡಿಶಿಲೆನ್ಗೋ.
ನೆಯ್ ಚ್ಚುವೈತ್ತೇಅಲೆನ್ಗೋ ಕನಿಯೆನ್ಗೋ ಪಾಲೆನ್ಗೋನಾ

ಪ್ರ|| ಅಚ್ಚುದನ್-ಆಶ್ರಿತರನ್ನು ಕೈಬಿಡದವನಾದ, ಅಮಲನೆನ್ಗೋ-ನಿರ್ಮಲ ಸ್ವಭಾವನು ಎಂದು ಹೇಳಲೋ, ಅಡಿಯವರ್–ಭಕ್ತರ, ವಿನೈ–ಭೋಗಾಲಾಭ ಕ್ಲೇಶವನ್ನು, ಕೆಡುಕ್ಕುಮ್–ನಾಶಪಡಿಸುವ, ನಚ್ಚುಮ್–ಪ್ರಿಯವಾದ, ಮಾಮ ರುನ್ದಮೆನ್ಗೋ–ದಿವ್ಯಾಷಧವೆಂದು ಹೇಳುವೆನೋ. ನಲ್–ವಿಲಕ್ಷಣವಾದ, ಅಮ್–ರಮ್ಯವಾದ, ಕಡಲ್–ಸಮುದ್ರದಲ್ಲಿ, ಅಮುದಮೆನ್ಗೋ – (ಅವನಿಂದ ಉದ್ಧೃತ ವಾದ) ಅಮೃತವೆಂದು ಹೇಳಲೋ, ಅಚ್ಚುವೈ – ಆ ಅಮೃತರಸವುಳ್ಳ, ಕಟ್ಟಿ ಯೆನ್ಗೋ–ಬೆಲ್ಲದ ಗಟ್ಟಿಯೆಂದು ಹೇಳಲೋ, ಅಱುಶುವೈ–ಷಡ್ರಸೋಪೇತವಾದ, ಅಡಿಶಿಲೆನ್ಗೋ–ಅನ್ನವೆಂದು ಹೇಳಲೋ, ನೆಯ್ ಶುವೈ–ತುಪ್ಪದರಸವುಳ್ಳ, ತೇಱ ಲೆನ್ಗೋ– ಜೇನ ತುಪ್ಪವೆಂದು ಹೇಳಲೋ, ಕನಿಯೆನ್ಗೋ – ಮಧುರವಾದ ಹಣ್ಣು ಎನ್ನಲೋ, ಪಾಲೆನ್ಗೋ–ಹಾಲು ಎನ್ನಲೋ ? ( ಏನೆಂದು ಅವನನ್ನು ನಾನು ವರ್ಣಿಸಲಿ ? )

( ಸ-ಗಾ-ರ ॥ )—
**ಕಿಂ ವಾಽಯಂ ತ್ವಮಲೋಽಚ್ಯುತಶ್ರಿತಜನಕ್ಲೇಶಾಪಹಃ ಕಿಂ ಹರಿಃ ?**
**ಕಿಂ ವಿಶ್ವಸ್ತಮಹೌಷಧಂ? ಕಿಮು ಸುಧಾವಾರಾಶಿಸಾರಾಮೃತಮ್ ? ।**
**ಕಿಂ ವಾ ತಂ ಮಧುರಂ ಬ್ರುವೇ ರಸಘನಂ ? ಕಿಂ ಷಡ್ರಸಂ ವೌದನಂ ?**
**ಕಿಂ ವೇದಂ ಮಧು ಸಾಜ್ಯಮೇವ? ಕಿಮಹೋ! ಪಕ್ವಂ ಫಲಂ ವಾ ಪಯಃ?॥**

ತಾ॥ (ರಸವತ್ಪದಾರ್ಥಗಳನ್ನು ತನ್ನ ವಿಭೂತಿಯಾಗಿ ಉಳ್ಳವನೆಂದು ಸರ್ವೇಶ್ವರನನ್ನು ಅವುಗಳೊಡನೆ ಏಕೀಭವಿಸಿ ಅನುಸಂಧಾನಮಾಡುತ್ತಾರೆ.) ಆಶ್ರಿತರನ್ನು ಕೈಬಿಡದ ಅಚ್ಯುತನು—ನಿತ್ಯನಿರ್ಮಲಸ್ವಭಾವನು ಎನ್ನಲೋ, ಭಕ್ತಕ್ಲೇಶನಾಶಕವಾದ ದಿವ್ಯಮಹೌಷಧವೆನ್ನಲೋ, ವಿಲಕ್ಷಣ (ದಿವ್ಯ) ಮನೋರಮವಾದ ಅಮೃತವೆನ್ನಲೋ, ಅಮೃತರಸವುಳ್ಳ ಬೆಲ್ಲದಗಟ್ಟಿ (ಕಲ್ಲುಸಕ್ಕರೆ) ಎನ್ನಲೋ, ದಿವ್ಯ ಷಡ್ರಸೋಪೇತವಾದ ಅನ್ನವೆನ್ನಲೋ, ತುಪ್ಪದ ರಸವುಳ್ಳ ಜೇನುತುಪ್ಪವೆನ್ನಲೋ, ಮಧುರತಮವಾದ ಪಕ್ವಫಲವೆನ್ನಲೋ, ಪರಿಶುದ್ಧವಾದ ಹಾಲು ಎನ್ನಲೋ ?—ಏನೆಂದು ಅವನನ್ನು ವರ್ಣಿಸಲಿ ಎಂದು ತಾತ್ಪರ್ಯ. (ಅವನು ಸರ್ವದೋಷಪ್ರಣಾಶಕನಾಗಿಯೂ ಆಶ್ರಿತರೊಡನೆ ನಿತ್ಯಸಂಶ್ಲೇಷಮಾಡುವವನಾಗಿಯೂ ಸಕಲವಿಧಕ್ಲೇಶಾಪಹಾರಿಯಾಗಿಯೂ ಪರಮಭೋಗ್ಯನಾಗಿಯೂ ಇದ್ದಾನೆಂದು ಭಾವವು.)

(೭) ಪಾಲೆನ್ಗೋ ನಾನ್ಗುವೇದಪ್ಪಯನೆನ್ಗೋ, ಶಮೆಯನೀದಿ
ನೂಲೆನ್ಗೋ, ನುಡಙ್ಗ ಕೇಳ್ವಿಯಿಶೈಯೆನ್ಗೋ, ಇವತ್ತುಳ್ ನಲ್ಲ
ಮೇಲೆನ್ಗೋ, ವಿನೈಯಿಲ್ ಮಿಕ್ಕಪಯನೆನ್ಗೋ. ಕಣ್ಣನೆನ್ಗೋ
ಮಾಲೆನ್ಗೋ ಮಾಯನೆನ್ಗೋ ವಾನವರಾದಿಯೈಯೇ.

ಪ್ರ॥ ವಾನವರ್-ಎಲ್ಲಾ ದೇವತೆಗಳಿಗೂ, ಆದಿಯೈ-ಆದಿಕಾರಣಭೂತನನ್ನು, ನಾನ್ಗುವೇದಮ್–ನಾಲ್ಕುವೇದಗಳ, ಪಾಲೆನ್ಗೋ – ಶಾಖಾದಿವಿಭಾಗವೆನ್ನಲೋ, ಪಯನೆನ್ಗೋ – ಅವುಗಳ ಪ್ರಯೋಜನರೂಪ ಫಲವೆನ್ನಲೋ, ಶಮಯಮ್ – ಅರ್ಥವ್ಯವಸ್ಥಾಪಕವಾದ, ನೀದಿ–ನ್ಯಾಯಗಳನ್ನು ಪ್ರತಿಪಾದಿಸುವ, ನೂಲೆನ್ಗೋ–ಮೀಮಾಂಸಾಶಾಸ್ತ್ರವೆನ್ನಲೋ, ನುಡಙ್ಗ – ಶ್ರೋತೃಚಿತ್ತಾಕರ್ಷಕವಾದ, ಕೇಳ್ವಿ–ವಿಚಾರಗಳ (ಕೀರ್ತನಗಳ), ಇಶೈಯೆನ್ಗೋ – ಗಾನವೆಂದು ಹೇಳಲೋ, ಇವತ್ತುಳ್–ಇವುಗಳೊಳು, ನಲ್ಲ–ವಿಲಕ್ಷಣವಾದ, ಮೇಲ್ ಎನ್ಗೋ–ನಿರತಿಶಯಭೋಗ್ಯವೆನ್ನಲೋ, ವಿನೈಯಿಲ್–ಸಾಧನಾತಿರಿಕ್ತವಾದ, ಮಿಕ್ಕ–ಅತಿಶಯಿತವಾದ, ಪಯನೆನ್ಗೋ–ಪುಣ್ಯಫಲವೆನ್ನಲೋ, ಕಣ್ಣನೆನ್ಗೋ–ಆ ಫಲರೂಪನಾದ (ಆನ

ನ್ಮಾತ್ಮಕ) ಶ್ರೀಕೃಷ್ಣನೆನ್ನಲೋ, ಮಾಲೆನ್ಗೋ – ಆಶ್ರಿತವ್ಯಾಮೋಹವುಳ್ಳವನೆನ್ನಲೋ, ಮಾಯನೆನ್ಗೋ-ಆಶ್ಚರ್ಯಗುಣಚೇಷ್ಟಿತಾದಿಯುಕ್ತನು ಎನ್ನಲೋ? (ಏನೆಂದು ವರ್ಣಿಸಲಿ?)

(ಸ-ಗಾ-ರ ||)

ಶಾಖಾರೂಪಮಿದಂ ಚಕುಶ್ಶ್ರುತಿಫಲಂ ಕಿಂ ನೀತಿಸೂತ್ರಾತ್ಮಕಂ?
ಕಿಂ ಸಙ್ಗೀತಮಿದಂ ಮನೋರಮಮುತ ಶ್ರೇಷ್ಠಂ ಚ ಸರ್ವೇಷ್ವಪಿ? |
ಸರ್ವಾತೀತಮಿದಂ ಫಲಂ ಕಿಮಸಮಂ ಕೃಷ್ಣಂ ಬ್ರುವೇಽಹಂ ಪತಿಂ
ಮಾಯಾಚೇಷ್ಟಿತಮಾದಿಪೂರುಷಮಿಮಂ ದೇವಾಧಿದೇವಂ ಹರಿಮ್? ||

ತಾ|| (ವೇದ—ವೈದಿಕಾದಿ ಶಾಸ್ತ್ರರೂಪ ಶಬ್ದರಾಶಿಯನ್ನೂ ಸಂಗೀತಾದಿ ಶಬ್ದರಾಶಿಯನ್ನೂ ಇವನ ವಿಭೂತಿಯೆಂದು ಅನುಸನ್ಧಾನಮಾಡುತ್ತಾರೆ.) ಸರ್ವದೇವಾದಿ ಮೂಲಭೂತನನ್ನು ಸಕಲವೇದಶಾಖಾತ್ಮಕನು ಎನ್ನಲೋ, ಅವುಗಳ ಫಲರೂಪವೆನ್ನಲೋ, ಸಕಲವಿಧ ನೀತಿಪ್ರತಿಪಾದಕವಾದ ಮೀಮಾಂಸಾಶಾಸ್ತ್ರವೆನ್ನಲೋ, ಶ್ರೋತ್ರಚಿತ್ತಾಕರ್ಷಕವಾದ ದಿವ್ಯಗಾನವೆನ್ನಲೋ, ಸರ್ವಶ್ರೇಷ್ಠವಾದ ನಿರತಿಶಯಭೋಗ್ಯವಸ್ತುವೆನ್ನಲೋ, ಸಾಧನಾತಿರಿಕ್ತವಾದ ಸಕಲಪುಣ್ಯಫಲವೆನ್ನಲೋ, ಶ್ರೀಕೃಷ್ಣನೆನ್ನಲೋ, ಆಶ್ರಿತವ್ಯಾಮೋಹವುಳ್ಳವನೆನ್ನಲೋ, ಆಶ್ಚರ್ಯಗುಣಚೇಷ್ಟಿತನೆನ್ನಲೋ—ಏನೆಂದು ಇವನನ್ನು ವರ್ಣಿಸಲಿ?

(೭) ವಾನವರಾದಿಯೆನ್ಗೋ ವಾನವರ್ ದೆಯ್ವಮೆನ್ಗೋ,
ವಾನವರ್ ಪೋಕಮೆನ್ಗೋ ವಾನವರ್ ಮುಱ್ಱುಮೆನ್ಗೋ,
ಊನಮಿಲ್ ಶೆಲ್ವಮೆನ್ಗೋ ವೂನಮಿಲ್ ಶುವರ್ಕ್ಕಮೆನ್ಗೋ,
ಊನಮಿಲ್ ಮೋಕ್ಕಮೆನ್ಗೋ ವೊಳಿಮಣಿವಣ್ಣನೈಯೇ

ಪ್ರ|| ಒಳಿ–ಪ್ರಕಾಶವುಳ್ಳ, ಮಣಿ–ಮಾಣಿಕ್ಯದಂತೆ ಇರುವ, ವಣ್ಣನೈ–ದಿವ್ಯಮಂಗಳವಿಗ್ರಹವುಳ್ಳವನನ್ನು, ವಾನವರ್–ದೇವತೆಗಳಿಗೆ, ಆದಿಯೆನ್ಗೋ–ಕಾರಣಭೂತನೆನ್ನಲೋ, ವಾನವರ್–ಆ ದೇವತೆಗಳಿಗೆ, ದೆಯ್ವಮೆನ್ಗೋ–ಆರಾಧ್ಯವಾದ ದೈವವೆನ್ನಲೋ, ವಾನವರ್–ಅವರಿಗೆ, ಪೋಕಮೆನ್ಗೋ – (ಆರಾಧನಫಲವಾದ) ಭೋಗವೆನ್ನಲೋ, ವಾನವರ್–ಆ ದೇವತೆಗಳ, ಮುಱ್ಱುಮೆನ್ಗೋ–ಸರ್ವವಿಧ ರಕ್ಷಣವೆನ್ನಲೋ, ಊನಮಿಲ್–ನಾಶವಿಲ್ಲದ, ಶೆಲ್ವಮೆನ್ಗೋ–ಐಶ್ವರ್ಯವೆನ್ನಲೋ, ಊನಮಿಲ್–ಕಲ್ಪಾನ್ತಸ್ಥಾಯಿಯಾದ, ಶುವರ್ಕ್ಕಮೆನ್ಗೋ – ಸ್ವರ್ಗವೆನ್ನಲೋ, ಊನಮಿಲ್–ನಿತ್ಯಾಸಂಕುಚಿತವಾದ, ಮೋಕ್ಕಮೆನ್ಗೋ–ಮೋಕ್ಷಾನನ್ದವೆನ್ನಲೋ? (ಏನೆಂದು ವರ್ಣಿಸಲಿ?)

( ಸ-ಗಾ-ರ || )—

**ದೇವಾನಾಮಪಿ ಮೂಲಮೇವ ಕಿಮಿಮಂ ತೇಷಾಂ ಚ ಪೂಜ್ಯಂ ಬ್ರುವೇ ?**
**ಕಿಂ ತೇಷಾಮಪಿ ಭೋಗಮೇವ ಚ ಫಲಂ? ತೇಷಾಂ ಚ ಕಿಂ ರಕ್ಷಣಮ್?|**
**ಕಿಂ ವೈಶ್ವರ್ಯಮನಶ್ವರಂ ಚ ಕಲಯೇ ? ಕಿಂ ಸ್ವರ್ಗಲೋಕಂ ಸ್ಥಿರಂ ?**
**ನಿತ್ಯಾಸಙ್ಕುಚಿತಂ ಚ ಮೋಕ್ಷಮಥವಾ ಮಾಣಿಕ್ಯವರ್ಣಂ ಬ್ರುವೇ ? ||**

ತಾ || (ಐಶ್ವರ್ಯಾದಿಭೋಗವೂ ಸ್ವರ್ಗವೂ ಮೋಕ್ಷವೂ ಅವನ ವಿಭೂತಿ ರೂಪವೆಂದು ಹೇಳುತ್ತಾರೆ) ದಿವ್ಯಮಾಣಿಕ್ಯವರ್ಣನಾದ ನನ್ನ ಸ್ವಾಮಿಯನ್ನು ದೇವತೆಗಳಿಗೆ ಕಾರಣಭೂತನೆನ್ನಲೋ, ದೇವತೆಗಳಿಗೆ ಆರಾಧ್ಯನೆನ್ನಲೋ, ಅವರ ಆರಾಧನಫಲವಾದ ಭೋಗವೆನ್ನಲೋ, ಅವರ ಸರ್ವವಿಧ ರಕ್ಷಣವೆನ್ನಲೋ, ಅನಶ್ವರವಾದ ಐಶ್ವರ್ಯವೆನ್ನಲೋ, ಕಲ್ಪಾಂತಸ್ಥಾಯಿಯಾದ ಸ್ವರ್ಗವೆನ್ನಲೋ, ನಿತ್ಯಾಸಂಕುಚಿತವಾದ ಮೋಕ್ಷವೆನ್ನಲೋ—ಏನೆಂದು ವರ್ಣಿಸಲಿ ? ( ಇವುಗಳಿಗೆಲ್ಲಾ ಆತ್ಮಭೂತನು ಅವನೇ ಎಂದು ಭಾವವು.)

(೮) ಒಳಿಮಣಿವಣ್ಣನೆನ್ಗೋ ಒರುವನೆನ್ಱೇತ್ತ ನಿನ್ಱ,
ನಳಿರ್ಮದಿಚ್ಚಡೈಯನೆನ್ಗೋ ನಾನ್ಮುಕಕ್ಕಡವುಳೆನ್ಗೋ,
ಅಳಿಮಕಿೞ್ನ್ದುಲಕಮೆಲ್ಲಾಮ್ ಪಡೈತ್ತವೈ ಯೇತ್ತನಿನ್ಱ,
ಕಳಿಮಲರ್‌ತ್ತುೞಾಯನೆಮ್ಮಾನ್ ಕಣ್ಣನೈ ಮಾಯನೈಯೇ.

ಪ್ರ|| ಅಳಿ – ರಕ್ಷಣೋಪಕಾರನಿಮಿತ್ತವಾಗಿ, ಮಕಿೞ್ನ್ದು–ಸಂತುಷ್ಟನಾಗಿ, ಉಲಕಮೆಲ್ಲಾಮ್ – ಸಕಲಲೋಕಗಳನ್ನೂ, ಪಡೈತ್ತು–ಸೃಷ್ಟಿಮಾಡಿ, ಅವೈ–ಅವುಗಳು, ಏತ್ತ–(ತನ್ನನ್ನು) ಸ್ತೋತ್ರಮಾಡುವುದಕ್ಕಾಗಿ, ನಿನ್ಱ–ನಿಂತಿರುವ, ಕಳಿಮಲರ್–ಮಧುಸ್ಯಂದಿಯಾಗಿಯೂ ವಿಕಸಿತಪುಷ್ಪಯುಕ್ತವಾಗಿಯೂ ಇರುವ, ತುೞಾಯ್–ತುಳಸೀಮಾಲೆಯನ್ನು ಧರಿಸಿರುವ, ಎಮ್ಮಾನ್–ನನ್ನ ಸ್ವಾಮಿಯಾದ, ಮಾಯನೈ–ನವನೀತಚೌರ್ಯಾದ್ಯಾಶ್ಚರ್ಯಚೇಷ್ಟಿತವುಳ್ಳ, ಕಣ್ಣನೈ–ಶ್ರೀಕೃಷ್ಣನನ್ನು, ಮಣಿ–ಮಾಣಿಕ್ಯದಂತೆ, ಒಳಿ – ಕಾಂತಿಯುಳ್ಳ, ವಣ್ಣನೆನ್ಗೋ – ಬಣ್ಣವುಳ್ಳವನೆಂದು ಹೇಳಲೋ; ಒರುವನೆನ್ಱು – ಅದ್ವಿತೀಯನೆಂದು, ಏತ್ತನಿನ್ಱ–ಆಶ್ರಿತರು ಸ್ತೋತ್ರಮಾಡುವಂತೆ ನಿಂತಿರುವ, ನಳಿರ್ಮದಿ–ಶೀತಳಚಂದ್ರಕಲಾಧಾರಿಯಾದ, ಶಡೈಯನೆನ್ಗೋ–ಜಟಾಧಾರಿಯಾದ ರುದ್ರನು ಎನ್ನಲೋ, ನಾನ್ಮುಕಕ್ಕಡವುಳ್ ಎನ್ಗೋ–ಚತುರ್ಮುಖನಾದ ಬ್ರಹ್ಮದೇವನು ಎನ್ನಲೋ ? (ಏನೆಂದು ವರ್ಣಿಸಲಿ ?)

( ಸ-ಗಾ- ರ || )—

**ಲೋಕಾನಾಮಪಿ ರಕ್ಷಣಾಚ್ಚ ಮುದಿತಂ ಸೃಷ್ಟ್ಯೈಶ್ವರ್ಯೈಸ್ಸಂಸ್ತುತಂ**
**ಕೃಷ್ಣಂ ಮೇ ಪ್ರಭುಮೇವ ಮಾಯಿನಮಿಮಂ ದಿವ್ಯಂ ಹರಿಂ ಸ್ರಗ್ವಿಣಮ್ |**
**ಕಿಂ ವಾಽಹಂ ಮಣಿವರ್ಣಮುಜ್ಜ್ವಲಮಹೋ! ವಚ್ಮಿ ಸ್ವಯಂ ಸ್ತುತ್ಯಮೇ-**
**ವಾಹೋಸ್ವಿಜ್ಜಟಿನಂ ಹಿಮಾಂಶುಶಿರಸಂ ? ಕಿಂ ವಾ ವಿರಿಂಚಂ ಬ್ರುವೇ ? ||**

ತಾ|| (ಲೋಕಪ್ರಧಾನರಾದ ಬ್ರಹ್ಮರುದ್ರಾದಿಗಳೂ ಅವನ ವಿಭೂತಿರೂಪ ವೆಂದು ಹೇಳುತ್ತಾರೆ.) ಸಕಲಲೋಕಗಳ ಸೃಷ್ಟಿಯಂ ಮಾಡಿ ಅವುಗಳಿಂದ ಸ್ತುತ್ಯ ನಾಗಿ ನಿಂತಿರುವ ದಿವ್ಯತುಳಸೀಮಾಲಾಧರನಾದ ನನ್ನ ಸ್ವಾಮಿಯಾದ (ಮಾಯಾ ಮಯನಾದ) ಶ್ರೀಕೃಷ್ಣನನ್ನು ನಾನು ಏನೆಂದು ವರ್ಣಿಸಲಿ? ದಿವ್ಯ ಮಾಣಿಕ್ಯ ವರ್ಣನೆನ್ನಲೋ, ಆಶ್ರಿತರಿಂದ ಅದ್ವಿತೀಯನೆಂದು ಸ್ತೋತ್ರವಮಾಡಲ್ಪಡುವ ಚನ್ದ್ರಕಲಾಧರನಾದ ಜಟಾಧರ (ರುದ್ರ)ನೆನ್ನಲೋ, ಚತುರ್ಮುಖನಾದ ಬ್ರಹ್ಮ ದೇವನೆನ್ನಲೋ? (ಇವರಿಗೂ ಅನ್ತರಾತ್ಮನು ಅವನೇ ಎಂದು ಭಾವವು)

(೯) ಕಣ್ಣನೈ ಮಾಯನ್ತನ್ನೈಕ್ಕಡಲ್ ಕಡೈನ್ದಮುದಮ್
ಕೊಣ್ಡ,
ಅಣ್ಣಲೈ ಯಚ್ಚುದನೈ ಯನನ್ದನೈ ಯನನ್ದನ್ತನ್ಮೇಲ್,
ನಣ್ಣಿ ನನ್ಗುಱಙ್ಗುಮನೈ ಞಾಲಮುಣ್ಡುಮಿೞ್ನ್ದ ಮಾಲೈ,
ಎಣ್ಣಮಾಟ್ಟೇನ್ ಯಾವೈಯುಮ್
ಯವರುಮ್ ತಾನೇ.

ಪ್ರ|| ಯಾವೈಯುಮ್-ಸಕಲವಿಧವಾದ ಅಚೇತನವರ್ಗವೂ, ಯವರುಮ್- ಸಕಲವಿಧ ಚೇತನವರ್ಗವೂ, ತಾನೇ-ತಾನೇಯಾಗಿ, ಕಣ್ಣನೈ-ಆಶ್ರಿತರಿಗೆ ಸುಲಭ ನಾಗಿರುವ (ಕೃಷ್ಣರೂಪಿಯಾದ), ಮಾಯನ್ತನ್ನೈ-ಆಶ್ಚರ್ಯಗುಣಚೇಷ್ಟಿತನನ್ನು, ಕಡಲ್ ಕಡೈನ್ದು-ಸಮುದ್ರಮಥನವಂಮಾಡಿ, ಅಮುದಮ್ ಕೊಣ್ಡ-ಅಮೃತವನ್ನು ಸ್ವೀಕರಿಸಿದ, ಅಣ್ಣಲೈ-ಸ್ವಾಮಿಯನ್ನು, ಅಚ್ಚುದನೈ-ಆಶ್ರಿತರನ್ನು ಕೈಬಿಡದವ ನಾದ, ಅನನ್ತನೈ- ಅಪರಿಚ್ಛಿನ್ನಸ್ವರೂಪಾದಿ ವೈಭವವುಳ್ಳವನನ್ನು, ಅನನ್ತನ್ ತನ್ಮೇಲ್-ಆದಿಶೇಷನಮೇಲೆ, ನಣ್ಣಿ-ಚೆನ್ನಾಗಿ ಹೊಂದಿಕೊಂಡು, ನನ್ಗು ಉಱಙ್ಗು ಕಿನ್ಱಾನೈ- ಆದರದೊಡನೆ ನಿದ್ರೆಮಾಡುತ್ತಿರುವವನನ್ನು, ಞಾಲಮ್ ಉಣ್ಡು-ಸಕಲ ಲೋಕಗಳನ್ನೂ ಉದರದಲ್ಲಿಟ್ಟು ರಕ್ಷಿಸಿ, ಉಮಿೞ್ನ್ದ-ಈಚೆಗೆ ಬರುವಂತೆ (ಉದ್ಧ

ವಿಸುವಂತೆ) ಮಾಡಿದ, ಮಾಲ್ಕೈ – ಆಶ್ರಿತವತ್ಸಲನನ್ನು, ಎಣ್ಣಾಮ್ ಆಱು–ನಿರ್ಣಯಿಸಿ ಚಿನ್ತಿಸುವ ಪ್ರಕಾರವನ್ನು, ಅಱಿಯಮಾಟ್ಟೇಱ್–ತಿಳಿಯಲಾರೆನು.

( ಸ–ಗಾ–ರ || )—

ಸರ್ವಾಚೇತನಚೇತನಾತ್ಮಕಮಿಮಂ ಕೃಷ್ಣಸ್ತು ಮಾಯಾಮಯಾಂ
ಹೃತ್ವಾ ಒವೆಸ್ಫೀನಿಧಿಮನ್ಥನಾದಮೃತಮೇವಾಸ್ಮದ್ವಿಭುಂ ಚಾಚ್ಯುತಮ್ |
ಸ್ತುತ್ವಾ ಒನನ್ತಮನನ್ತಶಾಯಿನಮುಶಂ ಲೋಕಾನ್ ಗಿಳನ್ತಂ ಪುನ
ರ್ವಾತ್ಸಲ್ಯಾದಪಿ ಚೋದ್ಗಿರನ್ತಮಧುನಾ ಮಾತುಂ ನ ವೈ ಶಕ್ನುಯಾಮ್ ||

ತಾ || (ಕಾರ್ಯಕಾರಣರೂಪವಾದ ಸಕಲಚೇತನಾಚೇತನಗಳೂ ಅವನೇ ಯಾದುದರಿಂದ ಪರಿಚ್ಛೇದಪ್ರಕಾರವು ನನಗೆ ತಿಳಿಯದೆಂದು ಹೇಳುತ್ತಾರೆ.) ಸಕಲವಿಧ ಚೇತನಾಚೇತನವರ್ಗಗಳೂ ತಾನೇ ಆಗಿ, ಆಶ್ರಿತರಿಗೆ ಸುಲಭನಾಗಿಯೂ, ಆಶ್ಚರ್ಯಗುಣಚೇಷ್ಟಿತನಾಗಿಯೂ, ಸಮುದ್ರಮಥನಮಾಡಿ ಅಮೃತವನ್ನು ಸ್ವೀಕರಿಸಿದವನಾಗಿಯೂ, ಆಶ್ರಿತರನ್ನು ಕೈಬಿಡದವನಾಗಿಯೂ, ಅಪರಿಚ್ಛಿನ್ನ ಸ್ವರೂಪಸ್ವಭಾವನಾಗಿಯೂ, ಶೇಷಶಾಯಿಯಾಗಿಯೂ, ಸಕಲಲೋಕ ಸೃಷ್ಟಿ ಸ್ಥಿತಿ ಲಯಕರ್ತನಾಗಿಯೂ, ಆಶ್ರಿತವತ್ಸಲನಾಗಿಯೂ—ಇರುವ ಸ್ವಾಮಿಯನ್ನು ಪರಿಚ್ಛೇದಿಸಿ ಭಾವಿಸುವ ಪ್ರಕಾರವನ್ನು ನಾನು ತಿಳಿಯಲಾರೆನು. (ಇಂತಹ ಅಪರಿಚ್ಛಿನ್ನ ಸ್ವರೂಪಸ್ವಭಾವನನ್ನು ನಿರ್ಣಯಿಸಿ ತಿಳಿಯೋಣವು ಸಾಧ್ಯವಲ್ಲವೆಂದು ಭಾವವು.)

(೧೦) ಯಾವೈಯುಮ್ ಯವರುಮ್ ತಾನಾಯವರವರ್
ಶಮಯನ್ತೋಱುಮ್,
ತೋಯ್‌ವಿಲನ್ ಪುಲನೈನ್ದುಕ್ಕುಮ್, ಶೊಲಪ್ಪಡಾ
ನುಣರ್ವಿನ್ ಮೂರ್ತ್ತಿ,
ಆವಿಶೇರುಯಿರಿನುಳ್ಳಾಲ್ ಆದುಮೋರ್ ಪಱ್ಱಿಲಾದ,
ಪಾವನೈ ಯದನೈ ಕೂಡಿಲ್ ಅವನೈಯುಮ್ ಕೂಡಲಾಮೇ.

ಪ್ರ|| ಯಾವೈಯುಮ್–ಎಲ್ಲಾ ಅಚೇತನವರ್ಗವೂ, ಯವರುಮ್–ಎಲ್ಲಾ ಚೇತನವರ್ಗವೂ, ತಾನಾಯ್–ತಾನೇಯಾಗಿ, ಅವರವರ್ – ಆಯಾ ಚೇತನರ, ಶಮಯನ್ತೋಱುಮ್ – ದೇವಾದಿ ಜಾತಿವ್ಯವಸ್ಥೆಗಳಲ್ಲಿ, ತೋಯ್‌ವಿಲನ್– ಸಂಗವಿಲ್ಲದವನಾಗಿ, ಪುಲನೈನ್ದುಕ್ಕುಮ್ – ಇಂದ್ರಿಯಪಞ್ಚಕಕ್ಕೂ, ಶೊಲಪ್ಪಡಾನ್–ವಿಷಯಭೂತನೆಂದು ಹೇಳಲ್ಪಡದವನಾಗಿಯೂ, ಉಣರ್ವಿನ್ ಮೂರ್ತ್ತಿ–ಸ್ವಯಂ

ಪ್ರಕಾಶಜ್ಞಾನಸ್ವರೂಪನಾಗಿಯೂ ಇರುವನು. (ಆದುದರಿಂದ) ಉಯಿರಿನ್-ಆತ್ಮಸ್ವರೂಪದ, ಉಳ್ಳಾಲ್-ಅನ್ತರದಲ್ಲಿ, ಆದುಮ್ ಓರ್-(ಶರೀರಗತವಾದ) ಜಡತ್ವ ಪರಿಣಾಮಿತ್ವಾದಿಸ್ವಭಾವಗಳು ಯಾವುದೊಂದರಲ್ಲೂ, ಪಱ್ಱಿಲಾದ - ಸಮ್ಬನ್ಧವಿಲ್ಲದ, ಪಾವನೈ-ಭಾವನೆಯು (ಜ್ಞಾನವು), ಅದನೈ-ಆ ಆತ್ಮಸ್ವರೂಪವನ್ನು, ಕೂಡಿಲ್-ಸೇರುವುದಾದರೆ, ಅವನೈಯುಮ್-ಆ ಈಶ್ವರನನ್ನೂ, ಕೂಡಲಾಮ್-ಸೇರಬಹುದು ; ಏ-ನಿಶ್ಚಯವು.

( ಸ-ಗಾ-ರ || )—

ಸರ್ವಾಚೇತನಚೇತನಾತ್ಮಕತಯಾ ಽಪ್ಯಸ್ಪೃಷ್ಟ ಏವ ಸ್ವಯಂ
ತತ್ತದ್ದೋಷಗಣೈಸ್ತದಿನ್ದ್ರಿಯಗಣಾತೀತಶ್ಚ ಮೂರ್ತಿರ್ಮತೇಃ |
ದೇಹೇ ಜೀವ ಇವ ಸ್ವಯನ್ತು ವಿಮಲಸ್ಸತ್ಯಂ ಚ ನಿತ್ಯಂ ಹರಿ-
ಸ್ತತ್ಸಮ್ಭಾವಿತಮೇವ ಚೇತ್ತು ತದಿದಂ ಚಾಸ್ತ್ಯೇವ ಸಮ್ಭಾವಿತಮ್||

ತಾ || (ಚೇತನಾಚೇತನವರ್ಗಗಳಿಗೆ ಅನ್ತರಾತ್ಮನಾಗಿದ್ದರೂ ಅವುಗಳ ದೋಷಗಳಿಂದ ಇವನು ಅಸಂಸ್ಪೃಷ್ಟನೆಂದು ಹೇಳುತ್ತಾರೆ.) ಸರ್ವೇಶ್ವರನು-ಚೇತನಾಚೇತನವರ್ಗಗಳೆಲ್ಲವೂ ತಾನೇಯಾಗಿದ್ದರೂ, ಆಯಾಚೇತನರ ದೇವಾದಿ ಜಾತಿಗಳಲ್ಲಿ ತನಗೆ ಸಮ್ಬನ್ಧವಿಲ್ಲದವನಾಗಿಯೂ, ಪಂಚೇನ್ದ್ರಿಯಾಗೋಚರನಾಗಿಯೂ, ಸ್ವಯಂಪ್ರಕಾಶಜ್ಞಾನಸ್ವರೂಪನಾಗಿಯೂ ಇರುವನು. ಆದುದರಿಂದ ಜೀವಾತ್ಮಸ್ವರೂಪಕ್ಕೆ ದೇಹಗತವಾದ ಜಡತ್ವ ಪರಿಣಾಮಿತ್ವಾದಿ ದೋಷಗಳ ಸಮ್ಬನ್ಧವು ಹೇಗೆ ಇಲ್ಲವೋ ಹಾಗೆಯೇ ಸರ್ವೇಶ್ವರನಿಗೂ ಅವನ ಶರೀರವಾದ ಚೇತನಾಚೇತನವರ್ಗಗಳ ದೋಷಸಮ್ಬನ್ಧವು ಸುತರಾಂ ಸಮ್ಭವಿಸಲಾರದು—ಎಂದು ಭಾವವು.

(೧೧) ಕೂಡಿವಣ್ಡಱೈಯುಮ್ ತಣ್ತಾರ್ಕೊಣ್ಡಲ್
ಪೋಲ್ವಣ್ಣನ್ತನ್ನೈ,
ಮಾಡಲರ್ ಪೊೞಿಲ್ ಕುರುಕೂರ್ ವಣ್ ಶಡಕೋಪನ್ ಶೊನ್ನ,
ಪಾಡಲೋರಾಯಿರತ್ತುಳಿವೈಯುಮೋರುಪತ್ತುಮ್ ವಲ್ಲಾರ್,
ವೀಡಿಲ ಪೋಗಮೆಯ್ದಿ ವಿರುಮ್ಬುವರಮರರ್ ಮೊಯ್ತ್ತೇ.

ಪ್ರ|| ವಣ್ಡು-ದುಂಬಿಗಳು, ಕೂಡಿ-ಸೇರಿ, ಅಱೈಯುಮ್-ಶಬ್ದಮಾಡುವ, ತಣ್ - ಶೀತಳವಾದ, ತಾರ್-ಮಾಲೆಯನ್ನು ಧರಿಸಿರುವ, ಕೊಣ್ಡಲ್ಪೋಲ್

ವರ್ಣ್ಣತ್ತನ್ನೈ – ನೀಲಮೇಘದಂತೆ ವರ್ಣವುಳ್ಳ ಸರ್ವೇಶ್ವರನನ್ನು, (ಸ್ತೋತ್ರ ಮಾಡಲು) ಅಲರ್ – ಸುತ್ತಲೂ ಹರಡಿಕೊಂಡಿರುವ, ಪೊಳಿಲ್ – ವೃಕ್ಷ ಷಂಡಗಳುಳ್ಳ, ಕುರುಕೂರ್–ಕುರುಕಾಪುರಿಗೆ ನಿರ್ವಾಹಕರಾದ, ವಣ್‌ಶಡಕೋಪನ್– ಉದಾರರಾದ ನಮ್ಮಾೞ್ವಾರ್ರು, ಶೊನ್ನ–ಹೇಳಿದ(ರಚಿಸಿದ), ಪಾಡಲ್–ಗಾನಸ್ವರ ದೊಡನೆ ಕೂಡಿದ, ಓರ್ ಆಯಿರತ್ತುಳ್–ಅದ್ವಿತೀಯವಾದ ಸಹಸ್ರಪದ್ಯಮಾಲೆ ಯೊಳು, ಇವ್ವೈಯುಮ್–ಅಖಿಲವಿಭೂತಿಪ್ರಕಾರತ್ವ ಪ್ರತಿಪಾದಕವಾದ ಈ, ಒರು - ಅದ್ವಿತೀಯವಾದ, ಪತ್ತುಮ್–ದಶಕವನ್ನು, ವಲ್ಲಾರ್–ಅಭ್ಯಸಿಸಿದವರು, ವೀಡು ಇಲ–ಅವಿಚ್ಛಿನ್ನವಾದ, ಪೋಕಮ್–ಭಗವದನುಭವವನ್ನು, ಎಯ್‌ದಿ–ಹೊಂದಿ, ಅಮರರ್–ನಿತ್ಯಸೂರಿಗಳು, ಮೊಯ್‌ತ್ತು – ಎಲ್ಲರೂಸೇರಿ, ವಿರುಮ್ಬುವರ್–ಆಶೆ ಪಡುವಂತೆ ದಿವ್ಯಪದವಿಯನ್ನು ಹೊಂದುವರು.

( ಸ–ಗಾ–ರ– ‖ )—

ಭೃಙ್ಗೋಪೇತಸುಮಸ್ರಜಂ ಹರಿಮಿಮಂ ನೀಲಾಭ್ರವರ್ಣಂ ಸ್ತುವನ್
ಸಾಹಸ್ರಂ ಕುರುಕೇಶ್ವರಶ್ಶಠರಿಪುರ್ಗಾನ್ಯಂ ತ್ವಕಾರ್ಷೀಚ್ಛುಭಮ್ ।
ತತ್ರೇದಂ ದಶಕಂ ಪಠನ್ತಿ ಭುವಿ ಯೇ ತೇ ನಿತ್ಯಸೂರಿಪ್ರಿಯಾಃ
ನಿತ್ಯಂ ಸ್ಯುಃ ಪರಮೇ ಪದೇ ಭಗವತೋ ನಿತ್ಯಾನುಭೂತ್ಯಾ ಸ್ವಯಮ್‖

ತಾ‖ (ಈ ದಶಕವನ್ನು ಅಭ್ಯಾಸಮಾಡುವವರು ಅವಿಚ್ಛಿನ್ನಭಗವದನುಭವವಂ ಹೊಂದಿ ನಿತ್ಯಸೂರಿಗಳಿಂದಲೂ ಆದರಿಸಲ್ಪಡುವರೆಂದು ಫಲಶ್ರುತಿಯನ್ನು ಹೇಳು ತ್ತಾರೆ.) ಶಬ್ದಾಯಮಾನವಾದ ಭ್ರಮರಗಳಿಂದ ಕೂಡಿದ ಮಾಲೆಯನ್ನು ಧರಿಸಿರುವ ನೀಲಮೇಘವರ್ಣನನ್ನು ಸ್ತೋತ್ರಮಾಡಲು ಶ್ರೀ ಕುರುಕಾಪುರೀ ನಿರ್ವಾಹಕರಾದ ನಮ್ಮಾೞ್ವಾರ್ರು ರಚಿಸಿರುವ ಗಾನಾತ್ಮಕ ಸಹಸ್ರಪದ್ಯಮಾಲೆಯೊಳು ಈ ಅದ್ವಿತೀ ಯವಾದ ದಶಕವನ್ನು ಬಲ್ಲವರು ಅವಿಚ್ಛಿನ್ನವಾದ ಭಗವದ್ಭೋಗವಂ ಪಡೆದು ನಿತ್ಯಸೂರಿಗಳಿಗೂ ಆದರಣೀಯರಾಗುವರು.

( ದ್ರು–ಉ–ಸಂ ‖ )—

ಸರ್ವಂ ಜಗತ್ತನುಮವಲೋಕ್ಯ ವಿಭೋಶ್ಶರೀರಂ
ತದ್ವಾಚಿನಶ್ಚ ಸಕಲಾನಪಿ ಶಬ್ದರಾಶೀನ್ ।
ತಾನ್ ಭೂತಭೌತಿಕಮುಖಾನ್ ಕಥಯನ್ ಪದಾರ್ಥಾನ್
ದಾಸ್ಯಂ ಚಕಾರ ವಚಸೈವ ಮುನಿಶ್ಚತುರ್ಥೇ ‖

( ದ್ರ–ಉ–ತಾ–ರ ॥ ) —
ಭೂತ್ಯೈಸ್ತತ್ಕಾರ್ಯಭೂತ್ಯೈಶ್ಚ ಭನಿಜವಪುಷಾ ದೀಪ್ತಿಮದ್ಭಿಃ ಪದಾರ್ಥೈಃ
ಪಥ್ಯಾಸ್ವಾದೋಪಪನ್ನೈಶ್ಶ್ರುತಿಮುಖಶುಭಗಾಶೇಷಶಬ್ದಪ್ರಸಙ್ಗೈಃ।
ನಾನಾಕಾರೈಃ ಪುಮರ್ಥೈರ್ಜಗದಧಿಪತಿಭಿಶ್ಚೇತನಾಚೇತನಾಖ್ಯೈ-
ರ್ಜುಷ್ಟಂ ದೋಷೈರದುಷ್ಟಂ ನಿಖಿಲತನುತಯಾ ಸಂಪ್ರತುಷ್ಟಾವ ಶುಷ್ಟಃ ॥

(ಈ ಚತುರ್ಥದಶಕದ ಸಾರಾಂಶ)

ಈ ನಾಲ್ಕನೆಯ ದಶಕದಲ್ಲಿ ಶ್ರೀ ಶಠಾರಿಮುನಿವರ್ಯರು—ಸಕಲ ಭೂತ ಭೌತಿಕ ಪದಾರ್ಥಗಳೂ, ಮಾಣಿಕ್ಯಾದಿ ಸಕಲೋಜ್ಜ್ವಲವಸ್ತುಗಳೂ, ಸಕಲರಸವತ್ಪದಾರ್ಥಗಳೂ, ಸಕಲವೇದಾದಿ ಶಬ್ದರಾಶಿಗಳೂ, ಐಶ್ವರ್ಯಾದಿ ಪುರುಷಾರ್ಥಗಳೂ, ಬ್ರಹ್ಮರುದ್ರಾದಿ ದೇವತೆಗಳೂ, ಸಕಲ ಚೇತನಾಚೇತನಗಳೂ ಸರ್ವೇಶ್ವರನ ವಿಭೂತಿರೂಪವೆಂದು ವರ್ಣಿಸಿ, ಅವುಗಳ ದೋಷಗಳು ಇವನನ್ನು ಮುಟ್ಟಲಾರವೆಂಪು ನಿರೂಪಿಸಿ ಇರುತ್ತಾರೆ. (ಇದೇ ವಾಚಿಕಕೈಂಕರ್ಯನೆಂದು ಪರಿಗಣಿತವಾಗಿದೆ.)

---

ಶ್ರೀಃ

## ತೃತೀಯಶತಕದಲ್ಲಿ—ಪಂಚಮದಶಕ.

(ಮೊಯ್‌ಮ್ಮಾವೂಪ್ಪೊಳಿಲ್ —)

( ಈ ದಶಕದಲ್ಲಿ—ಭಗವತ್ಕೈಂಕರ್ಯ ನಿರತರ ಪ್ರಶಂಸೆಯೂ, ಇತರರ ನಿಂದೆಯೂ ಮಾಡಲ್ಪಡುತ್ತದೆ )

---

(೧) ಮೊಯ್‌ಮ್ಮಾವೂಪ್ಪೊಳಿಲ್ ಪೊಯ್‌ಕೈಮುದಲೈ
ಚ್ಚಿಕ್ಕಪ್ಪಟ್ಟು ನಿನ್ರ,
ಕೈಮ್ಮಾವುಕ್ಕರುಳ್‌ಶೆಯ್‌ದ ಕಾರ್ಮುಗಿಲ್ ಪೋಲ
ವಣ್ಣನ್ ಕಣ್ಣನ್,
ಎಮ್ಮಾನೈ ಚ್ಚೊಲ್ಲಿಪ್ಪಾಡಿ ಯೆಳುನ್ದುಮ್ ಪಱನ್ದುಮ್
ತುಳ್ಳಾದಾರ್,
ತಮ್ಮಾಲ್ ಕರುಮಮೆನ್ ಶೊಲ್ಲೀರ್ ತಣ್ಕಡಲ್
ವಟ್ಟತ್ತುಳ್ಳೀರೇ.

ಪ್ರ || ಮೊಯ್–ಸೇರಿಕೊಂಡು, ಮಾ–ಉನ್ನತವಾದ, ಪೂ–ಪುಷ್ಪಗಳೊಂದಿಗೆ ಕೂಡಿದ, ಪೊೞಿಲ್–ವೃಕ್ಷಗಳುಳ್ಳ, ಪೊಯ್ಕೈ–ತಟಾಕದಲ್ಲಿ (ಮಡುವಿನಲ್ಲಿ), ಮುದಲೈ–ಮೊಸಳೆಯಿಂದ, ಶಿಱೈಪ್ಪಟ್ಟ–ಆಕ್ರಮಿಸಲ್ಪಟ್ಟ ನಿನ್ಱ–ನಿಂತ, ಕೈಮ್ಮಾವುಕ್ಕು–ಆನೆಗೆ, ಅರುಳ್‌ಶೆಯ್ದ–ಕೃಪೆಮಾಡಿದ, ಕಾರ್ಮುಗಿಲ್‌ವಣ್ಣ–ನೀಲಮೇಘವರ್ಣನಾದ, ಕಣ್ಣ–ಸುಲಭನಾದ, ಎಮ್ಮಾನೈ–ನಮ್ಮ ಸ್ವಾಮಿಯನ್ನು, ಶೊಲ್ಲಿ–ಬಾಯಿಂದ ಸ್ತೋತ್ರಮಾಡಿ, ಪಾಡಿ–ಆನನ್ದದಿಂದ ಹಾಡಿ, ಎೞುನ್ದುಮ್ ಪಱನ್ದುಮ್–ಮೇಲಕ್ಕೆ ಹಾರಿ ಹಾರಿ, ತುಳ್ಳಾದಾರ್ ತಮ್ಮಾಲ್–ನರ್ತನಮಾಡದೆ ಇರುವವರಿಂದ, ಎೕ ಕರುಮಮ್–ಏನುಫಲ ? (ಅವರು ಇದ್ದೇನುಫಲ ?) ತಣ್–ಶೀತಳವಾದ, ಕಡಲ್–ಸಮುದ್ರದಿಂದ ಪರಿವೃತವಾದ ವಟ್ಟತ್ತು–ಭೂಮಿಯಲ್ಲಿ, ಉಳ್ಳೀರೇ–ವಾಸಮಾಡುವ ಜನಗಳೇ ! ಶೊಲ್ಲೀರ್–(ನೀವು) ಹೇಳಿರಿ.

( ಸ–ಗಾ–ರ || )—

ರಮ್ಯಾಮ್ಭೋಜತಟಾಕಮಧ್ಯಕಲಿತಂ ನಕ್ರಾವೃತಂ ಹಸ್ತಿನಂ
ತ್ರಾತುಃ ಕಾಲಪಯೋದವರ್ಣಸರುಚೇಃ ಕೃಷ್ಣಸ್ಯ ನಾಥಸ್ಯನಃ|
ಸ್ತೋತ್ರಂ ನೈವ ಚರನ್ತಿ ಯೇ ನ ಚ ಮುದಾ ನೃತ್ಯನ್ತಿ ಯೇ ಸಮ್ಭ್ರಮಾತ್
ಕಿಂ ತೇಷಾಂ ಬತ! ಜೀವಿತಾತ್? ಕಿಮು ಫಲಂ ಬ್ರೂತಾದ್ಯ ಭೌಮಾ ನರಾಃ||

ತಾ|| (ಗಜೇಂದ್ರನನ್ನು ಆಪತ್ಕಾಲದಲ್ಲಿ ರಕ್ಷಿಸುವುದಕ್ಕಾಗಿ ಅತಿತ್ವರೆಯೊಡನೆ ಬಂದ ಕರುಣಾನಿಧಿಯಾದ ಸ್ವಾಮಿಯನ್ನು ಸ್ತೋತ್ರಮಾಡಿ ನರ್ತನಮಾಡದೆ ಇರುವವರ ಜನ್ಮವು, ವ್ಯರ್ಥವೆಂದು ಹೇಳುತ್ತಾರೆ.) ಸಮುದ್ರಪರಿವೃತವಾದ ಭೂಮಣ್ಡಲದಲ್ಲಿ ವಾಸಮಾಡುವ ಜನಗಳೇ ! ರಮ್ಯಾಮ್ಭೋಜಭರಿತವಾದ ತಟಾಕದಲ್ಲಿ ಮೊಸಳೆಯಿಂದ ಹಿಡಿಯಲ್ಪಟ್ಟ (ಆರ್ತಧ್ವನಿಯಿಂದ ಮೊರೆಯಿಡುವ) ಗಜೇನ್ದ್ರನನ್ನು (ಅತಿತ್ವರೆಯೊಡನೆ) ಬಂದು ರಕ್ಷಿಸಿದ ನೀಲಮೇಘಶ್ಯಾಮನಾದ ನಮ್ಮ ಸ್ವಾಮಿಯನ್ನು ಕೀರ್ತನಮಾಡಿ ನರ್ತಿಸದೆ ಇರುವವರ ಜನ್ಮವು ವ್ಯರ್ಥವಲ್ಲವೆ? ನೀವೇ ಹೇಳಿರಿ.

(೨) ತಣ್‌ಕಡಲ್ ವಟ್ಟತ್ತುಳ್ಳಾರೈತ್ತಮಕ್ಕಿರೈಯಾ
ತ್ತಡಿನ್ದುಣ್ಣುಮ್,
ತಿಣ್‌ಕೞಲ್‌ಕಾಲಶುರರ್‌ಕ್ಕುತ್ತೀಙ್ಗಿೞೈಕ್ಕುನ್ತಿರುಮಾಲೈ,
ಪಣ್‌ಕಳ್ ತಲೈಕ್ಕೊಳ್ಳಪ್ಪಾಡಿಪ್ಪಱನ್ದುಮ್ ಕುನಿತ್ತುೞಲಾದಾರ್,
ಮಣ್‌ಕೊಳ್ ಉಲಕಿಲ್ ಪಿಱಪ್ಪಾರ್ ವಲ್ವಿನೈ ಮೋದ ಮಲೈನ್ದೇ.

ಪ್ರ॥ತಣ್-ಶೀತಳವಾದ, ಕಡಲ್-ಸಮುದ್ರದಿಂದ ಪರಿವೃತವಾದ, ವಟ್ಟತ್ತು-ಭೂಮಿಯಲ್ಲಿ, ಉಳ್ಳಾರೈ-ಇರುವವರನ್ನು, ತಮಕ್ಕು ಇರೈಯಾ-ತಮಗೆ ಆಹಾರವಾಗಿ, ತಡಿನ್ದು ಉಣ್ಣುಮ್-ಕೊಂದು ತಿನ್ನುವ, ತಿಣ್-ದೃಢವಾದ, ಕ್ಕೂಲ್-ವೀರರ ಗೊಲುಸನ್ನು (ತಂಡೆಯನ್ನು), ಕಾಲ್ - ಕಾಲಿನಲ್ಲಿ ಧರಿಸಿರುವ, ಅಸುರರ್‌ಕ್ಕು-ರಾಕ್ಷಸರಿಗೆ, ತೀಙ್ಗು-ನಾಶವನ್ನು (ಕೇಡನ್ನು), ಇಳೈಕ್ಕುಮ್-ಮಾಡುವ, ತಿರುಮಾಲೈ - ಲಕ್ಷ್ಮೀನಾಥನನ್ನು, ಪಣ್‌ಕಳ್ - ಗಾನದ ಕೀರ್ತನೆಗಳು, ತಲೈಕ್ಕೊಳ್ಳ-ಶ್ರೇಷ್ಠವಾಗಿ ಪ್ರಕಾಶಿಸುವಂತೆ, ಪಾಡಿ-ಹಾಡಿ, ಪಱನ್ದುಮ್-ಆಕಾಶದಲ್ಲಿ ಮೇಲೆ ಹಾರಿ, ಕುನಿತ್ತು-ನರ್ತನಮಾಡಿ, ಉಙ್ಗಾದಾರ್-ಸರ್ವತ್ರ ಸಂಚರಿಸದೆ ಇರುವವರು, ಮಣ್‌ಕೊಳ್-ಮೃಣ್ಮಯವಾದ, ಉಲಕಿಲ್-ಈ ಲೋಕದಲ್ಲಿ, ವಲ್ವಿನೈ-ಮಹಾಪಾಪಗಳು, ಮಲೈನ್ದು-ಮೇಲೆಬಿದ್ದು, ನೋದ-ಕೆಳಗೆ ತಳ್ಳಿ ಹೊಡೆಯುವಂತೆ (ಅಪ್ಪಳಿಸುವಂತೆ), ಪಿಱಪ್ಪಾರ್-ಹುಟ್ಟುವವರು (ಇಂತಹ ನಿಕೃಷ್ಟಜನ್ಮವಂಪಡೆಯುವವರು.)

( ಸ-ಗಾ-ರ ॥ )—

ವಾರಾಶ್ಯಾವೃತಭೂತಲಸ್ಥಮನುಜಪ್ರಾಣಾನ್ತಕಾಂಶ್ಚಾಸುರಾನ್
ಪಾಪಿಷ್ಠಾನ್ ಬಲವೀರ್ಯಶೌರ್ಯಭರಿತಾನ್ ಹನ್ತುಂ ಕೃತಾವಿರ್ಭವಮ್ ।
ಶ್ರೀಕಾನ್ತಂ ಭುವಿ ದಿವ್ಯಗೀತಪಠನೈರ್ಯೇ ನ ಸ್ತುವನ್ತಿ ಸ್ವಯಂ
ಚೋತ್ಪ್ಲುತ್ಯಾಪಿ ಚರನ್ತಿ ನೈವ ಕಿಲ ತೇ ಪಾಪಾಃ ಪತನ್ತ್ಯಪ್ಯಧಃ ॥

ತಾ॥ ಭೂಲೋಕವಾಸಿಗಳನ್ನು ಕೊಂದುತಿನ್ನುವ ಬಲಿಷ್ಠರಾದ ರಾಕ್ಷಸರ ಧ್ವಂಸವನ್ನು ಮಾಡುವ ಲಕ್ಷ್ಮೀನಾಥನನ್ನು ದಿವ್ಯಗಾನಗಳಿಂದ ಹಾಡಿ ನರ್ತನ ಮಾಡಿ ಸಂಚರಿಸದೆ ಇರುವವರು ಈ ಲೋಕದಲ್ಲಿ ಮಹಾಪಾಪಾಭಿಹತರಾಗಿ ನಿಕೃಷ್ಟ ಜನ್ಮವಂ ಪಡೆಯುವರು. (ಇಂತಹ ಜನರು ನಿತ್ಯಸಂಸಾರಿಗಳಾಗಿ ಹುಟ್ಟುವರೆಂದು ಭಾವವು.)

(೩) ಮಲೈಯೈ ಯೆಡುತ್ತು ಕ್ಕಲ್ಮಾರಿಕಾತ್ತು ಪ್ಪಶುನಿರೈ ತನ್ನೈತ್ತೊಲೈವುತವಿರ್‌ತ್ತಪಿರಾನೈ ಚ್ಚೊಲ್ಲಿಚ್ಚೊಲ್ಲಿ ನಿನ್ಱು ನಿನ್ಱುಮ್,
ತಲೈಯಿನೋಡಾದನಮ್‌ತಟ್ಟ ತ್ತಡುಕುಟ್ಟಮಾಯ್

ಪ್ಪಱವಾದಾರ್,

ಅಲೈಕೊಳ್ ನರಕತ್ತಝುನ್ದಿ ಕ್ಕಿಡನ್ದುಱೈಕ್ಕಿಱ ವೆಮ್ಬರೇ

ಪ್ರ|| ಮಲೈಯೈ-ಗೋವರ್ಧನ ಪರ್ವತವನ್ನು, ಎಡುತ್ತು-ಎತ್ತಿ, ಕಲ್‌ಮಾರಿ (ಇನ್ದ್ರನಿಂದ ಬಂದ) ಮಹಾ (ಕಲ್ಲು) ಮಳೆಯನ್ನು, ಕಾತ್ತು-ತಡೆದು, ಪಶುನಿರೈ ತನ್ನೈ – ಗೋಸಂಘಗಳನ್ನು, ತೊಲೈವುತವಿರ್‌ತ್ತ – ನಾಶವಾಗದಂತೆ ರಕ್ಷಿಸಿದ, ಪಿರಾನೈ – ಉಪಕಾರಕನಾದ ಸ್ವಾಮಿಯನ್ನು, ಶೊಲ್ಲಿಚ್ಚೊಲ್ಲಿ – ಸ್ತೋತ್ರಮಾಡಿ ಮಾಡಿ, ಎಪ್ಪೋದುಮ್-ಸರ್ವಕಾಲದಲ್ಲೂ, ನಿನ್ರು-ಅವಿಚ್ಛಿನ್ನವಾಗಿ ನಿಂತು, ತಲೈಯಿನೋಡಾದನಮ್‌ತಟ್ಟ-(ಆದನತ್ತೋಡುತಲೈತಟ್ಟ)-ಭೂಮಿಯೊಂದಿಗೆ ತಲೆಯು ತಟ್ಟುವಂತೆ, ತಡುಕುಟ್ಟಮಾಯ್-ತಲೆಕೆಳಗಾಗಿ, ಶಿಱಾಡಾರ್-ಹಾರಿಯಾಡದೆ ಇರುವವರು, ಅಲೈಕೊಳ್-ಅನೇಕ ದುಃಖಗಳುಳ್ಳ, ನರಕತ್ತು-ನರಕದಲ್ಲಿ, ಅಲ್ಲಿನ್ದಿಕ್ಕಿಡನ್ದು – ಮುಳುಗಿಬಿದ್ದು, ಉೞೈಕ್ಕಿನ್ಱ-ಕ್ಲೇಶಪಡುವ, ವಮ್ಬರ್-ವೃಥಾ ಜಾತರು (ಭ್ರಷ್ಟರು).

( ಸ-ಗಾ-ರ || )—

**ಗೋಸಂಘಾನ್ ಪರಿರಕ್ಷಿತುಂ ಗಿರಿಧರಂ ನಾಥಂ ಶಿಲಾವರ್ಷತಃ**
**ಸ್ತುತ್ವಾ ಸ್ತುತ್ವಾಮನಾರತಂ ಭುವಿ ಶಿರೋ ವಿನ್ಯಸ್ಯ ಚೋರ್ಧ್ವಾಂಘ್ರಯಃ|**
**ನೃತ್ಯನ್ತೋ ನ ಭವನ್ತಿ ಯೇ ಬತ ! ಮಹಾಘೋರಾರ್ತಿಕೃನ್ನಾರಕೇ**
**ತೇ ಸತ್ಯಂ ಹಿ ಪತನ್ತಿ ಹನ್ತ ! ಸತತಂ ಕ್ಲೇಶಾಕುಲಾಸ್ಸ್ಯುಃ ಖಲಾಃ ||**

ತಾ|| ಗೋವರ್ಧನಪರ್ವತವನ್ನು ಎತ್ತಿ ಕಲ್ಲುಮಳೆಯನ್ನು ತಡೆದು ಗೋಸಂಘಗಳನ್ನು ರಕ್ಷಿಸಿದ ಸ್ವಾಮಿಯನ್ನು ಸ್ತೋತ್ರಮಾಡಿ ಮಾಡಿ ಸಂಭ್ರಮದಿಂದ ತಲೆಕೆಳಗಾಗುವಂತೆಹಾರಿ ನರ್ತನಮಾಡದೆ ಇರುವವರು ನರಕಾಬ್ಧಿಪತಿತರಾಗುವ ಭ್ರಷ್ಟರೇಸರಿ. (ಮಹೋಪಕಾರಕನಾದ ಭಗವನ್ತನಲ್ಲಿ ಕೃತಜ್ಞರಾಗದೆ ಇರುವವರು ನರಕದಲ್ಲಿ ಬೀಳುವರೆಂದು ಭಾವವು.)

(೪) ವಮ್ಬವಿೞ್ ಕೋದೈಪೊರುಟ್ಟಾ ಮಾಲ್ವಿಡೈಯೇೞು ಮಡರ್‌ತ್ತ
ಶೆಮ್ಬವಳತ್ತಿರಳ್‌ವಾಯ್ಜ್ ಶಿರೀದರನ್ ತೊಲ್‌ಪುಕೞ್‌ಪಾಡಿ,
ಕುಮ್ಬಿಡುನಟ್ಟಮಿಟ್ಟಾಡಿ ಕೋಕು ಕಟ್ಟುಣ್ಡುೞಲಾದಾರ್,
ತಮ್ಬಿಱಪ್ಪಾಲ್ ಪಯನೆನ್ನೇ ಶಾಪಮ್ ಶನಗ್ಗಳಿಡ್ಡೈಯೇ.

ಪ್ರ|| ವಮ್ಬು-ಸೌನ್ದರ್ಯವುಳ್ಳ, ಅವಿೞ್-ವಿಕಸಿತವಾದ, ಕೋದೈಪ್ಪೊರುಟ್ಪ್ಪೂ ಮಾಲೆಯನ್ನು ಧರಿಸಿರುವ ನೀಳಾ (ನಪ್ಪಿನ್ನೈ) ದೇವಿಯನ್ನು ಹೊಂದುವುದಕ್ಕೋಸ್ಕರ, ಮಾಲ್-ದೊಡ್ಡದಾದ, ವಿಡೈಯೇೞುಮ್ - ವೃಷಭಗಳು ಏಳನ್ನೂ, ಅಡರ್ತ್ತ-ಕೊಂದ, ಶೆಮ್‌ಪವಳಮ್-ಕೆಂಪುಹವಳದಂತೆ, ತಿರಳ್‌ವಾಯ್ದ-ದಪ್ಪವಾಗಿರುವ ಅಧರವುಳ್ಳ, ಶಿರೀದರ್ರ-ಶ್ರೀಧರನ (ವೀರಶ್ರೀಧರನಾದ ಕೃಷ್ಣನ), ತೊಲ್‌ಪುಕೞ್-ಸ್ವಾಭಾವಿಕವಾದ ಕಲ್ಯಾಣಗುಣಗಳನ್ನು, ಪಾಡಿ-ಹಾಡಿ, ಕುನ್ಬಿಟ್ಟುನಟ್ಟಮಿಟ್ಟಾಡಿ-ತಲೆಕೆಳಗಾಗಿ ನರ್ತನಮಾಡಿ, ಕೋಕು - ಅಕ್ರಮವಾದ, ಉಕಟ್ಟು-ಆರವಾರವನ್ನು (ಸಂಭ್ರಮವನ್ನು), ಉಣ್ಡು-ಮಾಡಿ ಅನುಭವಿಸಿ, ಉೞಲಾದಾರ್ ತಮ್-ಸಂಚರಿಸದೆ ಇರುವವರ, ಪಿಱಪ್ಪಾಲ್-ಜನ್ಮದಿಂದ, ಶಾದುಶನಜ್ಗಳಿಡೈಯೇ-ಸಾಧುಜನಗಳನಡುವೆ (ಸಜ್ಜನರ ಗೋಷ್ಠಿಯಲ್ಲಿ), ಎನ್‌ಪಯ್ದ-ಏನುಫಲವು? (ಅವರ ಜನ್ಮವು ನಿಷ್ಫಲವು).

( ಸ-ಗಾ-ರ || )—

**ನೀಳಾದೇವ್ಯನುಭೂತಯೇ ಭುವಿ ಮಹಾಸಪ್ತರ್ಷಭಧ್ವಂಸಿನಂ**
**ಸ್ತುತ್ವಾ ಶೀಲಗುಣಾನ್ವಿತಂ ಮುರಹರಂ ಬಿಮ್ಬಾಧರಂ ಶ್ರೀಧರಮ್ |**
**ನೃತ್ಯನ್ತ್ಯೇವ ನ ಚಾಕ್ರಮಾದ್ಭುವಿ ವಿಪರ್ಯಸ್ತಾಸ್ಸಮುಸ್ತಾಸ್ತು ಯೇ**
**ತೇಷಾಂ ಸಮ್ಭವತಃ ಫಲಂ ಕಿಮು ಭವೇತ್ಸನ್ಮಣ್ಡಲೇ ಭೂತಲೇ ? ||**

ತಾ || ನೀಳಾದೇವಿಯನ್ನು ಹೊಂದುವುದಕ್ಕೋಸ್ಕರ ಸಪ್ತವೃಷಭಗಳನ್ನೂ ಕೊಂದ ಪ್ರವಾಳಾಧರನಾದ ಶ್ರೀಧರನ ಕಲ್ಯಾಣಗುಣಗಳನ್ನು ಹಾಡಿ ಸಸಂಭ್ರಮ ನರ್ತನವಂಮಾಡದೆ ಇರುವವರ ಜನ್ಮವು (ಸಾಧುಗೋಷ್ಠಿಯಲ್ಲಿ) ನಿಷ್ಫಲವಲ್ಲವೇ? ಇವರು ಸಾಧುಗೋಷ್ಠಿಯಲ್ಲಿ ಸೇರುವುದಕ್ಕೆ ಸುತರಾಂ ಅನರ್ಹರೆಂದು ಭಾವವು.

(೫) ಶಾದುಶನತ್ತೈ ನಲಿಯುಮ್ ಕಞ್ಜನೈ ಚ್ಚಾದಿಪ್ಪದಱ್ಕು,
ಆದಿಯಮ್‌ಶೋದಿಯುರುವೈ ಯಙ್ಗುವೈತ್ತಿಙ್ಗುಪ್ಪಿಱನ್ದ,
ವೇದಮುಡಲ್ವನೈ ಪ್ಪಾಡಿ ವೀದಿಕಳ್‌ತೋಱುಂ

ತುಳ್ಳಾದಾರ್,
ಓದಿಯುಣರ್‌ನ್ದವರ್‌ಮುನ್ನಾ ವೆನ್‌ಶವಿಪ್ಪಾರ್ ಮನಿಶರೇ.

ಪ್ರ|| ಶಾದುಶನತ್ತೈ-ಸಾತ್ತ್ವಿಕಜನರಾದ ದೇವಕೀ ವಸುದೇವಾದಿಗಳನ್ನು, ನಲಿಯುಮ್-ಕ್ಲೇಶಪಡಿಸುವ, ಕಞ್ಜನೈ-ಕಂಸನನ್ನು, ಶಾದಿಪ್ಪದಱ್ಕು-ದಂಡಿಸು

ಪುದಕ್ಕೋಸ್ಕರ, ಆದಿ ಅಮ್ ಶೋದಿ ಉರುವೈ – ಪ್ರಧಾನವಾಗಿಯೂ ಅಪ್ರಾಕೃತವಾಗಿಯೂ ಇರುವ ದಿವ್ಯತೇಜೋರೂಪವನ್ನು, ಅಙ್ಗು–ಪರಮಪದದಲ್ಲಿ, ವೈತ್ತು–ಇಟ್ಟು (ಅದೇರೀತಿಯಲ್ಲಿ), ಇಙ್ಗು ವೈತ್ತು–ಇಲ್ಲಿಯೂ ಇಡುವಂತೆ, ಪಿಱನ್ದ–ಅವತರಿಸಿದ, ವೇದಮುದಲ್ವನೈ–ವೇದಗಳಿಂದ ಪ್ರತಿಪಾದಿಸಲ್ಪಟ್ಟ ಅವತಾರ ಮಾಹಾತ್ಮ್ಯವುಳ್ಳ ಪ್ರಧಾನಭೂತನನ್ನು, ಪಾಡಿ–ಸಂಕೀರ್ತನಮಾಡಿ, ವೀದಿಕಳ್ ತೋಱುಮ್–ಬೀದಿಗಳಲ್ಲೆಲ್ಲಾ, ತುಳ್ಳಾದಾರ್–ಆಡದೆ ಇರುವವರು, ಓದಿ–ಶಾಸ್ತ್ರಗಳನ್ನು ಓದಿ, ಉಣರ್ನ್ದವರ್ಮುನ್ನಾ – ಪ್ರಾಜ್ಞರಾಗಿರುವವರ ಸಾನ್ನಿಧ್ಯದಲ್ಲಿ, ಮನಿಶರ್ – ಮನುಷ್ಯರಂತೆ, ಎನ್ಶವಿಪ್ಪಾರ್–ಏನು ಜಪಮಾಡಬಲ್ಲರು ? (ಅವರು ಮನುಷ್ಯರೂ ಅಲ್ಲ; ಅವರ ಜಪವೂ ನಿರರ್ಥಕವೆಂದು ಭಾವವು.)

( ಸ–ಗಾ–ರ || )—

ಸಾಧೂನಾಮಪಿ ಚಾರ್ತಿಸನ್ತತಿಕರಂ ಕಂಸಂ ನಿಹನ್ತುಂ ಪರಂ
ಜ್ಯೋತಿಶ್ಶಾದ್ವ್ಯಮುದಾರಮಾವಿರಭವತ್ತತ್ರೈವ ಚಾತ್ರಾಪಿ ಯತ್ |
ವೇದಾನಾಮಪಿ ಚಾಧಿಕಾರಣಮಿದಂ ತತ್ತ್ವಂ ಸ್ತುವನ್ತಸ್ಸದಾ
ಯೇ ವೀಧೀಷು ಚರನ್ತಿ ನೈವ ಕಿಮು ತೇ ಪ್ರಾಜ್ಞಾಗ್ರತೋ ಜಾಪಕಾಃ?||

ತಾ|| ಸಾಧುಜನ ಹಿಂಸಕನಾದ ಕಂಸನನ್ನು ಕೊಲ್ಲುವುದಕ್ಕಾಗಿ ಅವತರಿಸಿದ ಅಪ್ರಾಕೃತ ದಿವ್ಯತೇಜೋರೂಪನಾದ ಭಗವನ್ತನು ಪರಮಪದದಲ್ಲಿಯೂ ತನ್ನ ರೂಪವನ್ನು ಇಟ್ಟು ಇಲ್ಲಿಯೂ ಅವತರಿಸಿ ವೇದಪ್ರತಿಪಾದ್ಯನಾಗಿಯುವುದರಿಂದ ಇವನನ್ನು ಸಂಕೀರ್ತನಮಾಡಿ ಬೀದಿಗಳಲ್ಲೆಲ್ಲಾ ನರ್ತನಮಾಡದೆ ಇರುವವರು ಶಾಸ್ತ್ರಜ್ಞರಮುಂದೆ ಏನು ಹೇಳಬಲ್ಲರು ? (ಯಾವ ಜಪವನ್ನು ಮಾಡಬಲ್ಲರು ! )— ಇವರುಗಳಿಂದ ಏನೂಪ್ರಯೋಜನವಿಲ್ಲವೆಂದು ಭಾವವು.

(೬) ಮನಿಶರುಮ್ ಮಱ್ಱುಮ್ ಮುಱ್ಱುಮಾಯ್
ಮಾಯಪ್ಪಿಱವಿ ಪಿಱನ್ದ,
ತನಿಯನ್ ಪಿಱಪ್ಪಿಲಿ ತನ್ನೈ ತ್ತಡಙ್ಕಡಲ್ ಚೇರ್ನ್ದ ಪಿರಾನೈ,
ಕ್ಕನಿಯೈ ಕ್ಕರುಮ್ಬಿನಿನ್ ಶಾಱ್ಱೈ ಕ್ಕಟ್ಟಿಯೈ ತ್ತೇನೈ
ಯಮುದೈ,
ಮುನಿವಿನ್ಱಿಯೇತ್ತಿ ಕ್ಕುನಿಪ್ಪಾರ್ ಮುೞುದುಣರ್
ನೀರ್ಮೈಯಿನಾರೇ.

ಪ್ರ॥ ಮನಿಶರುಮ್ – (ದಶಾವತಾರಾದಿಗಳಲ್ಲಿ) ಮನುಷ್ಯರೂಪವಾಗಿಯೂ, ಮಱ್ಱುಮ್-ಮಿಕ್ಕ ದೇವಜಾತಿಯಾಗಿಯೂ, ಮುಱ್ಱುಮಾಯ್-ಮಿಕ್ಕ ಎಲ್ಲಾ ತಿರ್ಯಗ್ಜಾತಿ ಮುಂತಾದುವುಗಳಾಗಿಯೂ, ಮಾಯಪ್ಪಿಱವಿ-ಆಶ್ಚರ್ಯಕರವಾದ ಅವತಾರಗಳಲ್ಲಿ, ಪಿಱನ್ದತನಿಯರ್ಕ-ಅವತರಿಸಿದ ಅದ್ವಿತೀಯನಾದ, ಪಿಱಪ್ಪಿಲಿ ತನ್ನೈ-("ಅಜಾಯಮಾನಃ"-ಎಂಬಂತೆ) ಕರ್ಮಾಧೀನಜನ್ಮರಹಿತನಾದವನನ್ನು, ತಡಮ್ ಕಡಲ್ ಶೇರ್ನ್ದ-ವಿಶಾಲವಾದ ಕ್ಷೀರಾಬ್ಧಿಯಲ್ಲಿ ಶಯನಮಾಡಿರುವ, ಪಿರಾನೈ-ಉಪಕಾರಕನಾದ ಸ್ವಾಮಿಯನ್ನು, ಕನಿಯೈ-ಪಕ್ವವಾದ ಮಧುರತಮವಾದ ಫಲವನ್ನು, ಇಱ್ಕರುಮ್ಬಿನ್ ಶಾಱ್ಱೈ-ಭೋಗ್ಯವಾದ ಕಬ್ಬಿನಸಾರವನ್ನು, ಕಟ್ಟಿಯೈ-ಅದರ ಗಟ್ಟಿಯನ್ನು (ಬೆಲ್ಲದ ಗಟ್ಟಿಯನ್ನು) ತೇನೈ-ಜೇನುತುಪ್ಪವನ್ನು, ಅಮುದೈ-ಅಮೃತವನ್ನು, (ಈಪ್ರಕಾರ ನಾನಾವಿಧ ಭೋಗ್ಯತಮವಸ್ತುಸ್ವರೂಪನಾದ ಭಗವಂತನನ್ನು), ಮುನಿವು ಇನ್ಱಿ-ದ್ವೇಷಬುದ್ಧಿ ಇಲ್ಲದೆ, ಏತ್ತಿ-ಸ್ತೋತ್ರಮಾಡಿ, ಕುನಿಪ್ಪಾರ್-ನರ್ತನಮಾಡುವವರು, ಮುೞುದು ಉಣರ್-ಸಕಲಶಾಸ್ತ್ರಗಳನ್ನೂ ತಿಳಿದ, ನೀರ್ಮೈಯಿನಾರ್-ಸ್ವಭಾವವುಳ್ಳವರು.

( ಸ–ಗಾ–ರ ॥ )—

ಮಾನುಷ್ಯಾತ್ಮಸುರತಿರ್ಯಗಾದಿವಪುಷಾ ಮಾಯಾತನುಂ ನಿಸ್ಸ್ವಮಂ
ಜಾತಂ ಚಾಪ್ಯಜಮುತ್ತಮಾಮ್ಬುಧಿಶಯಂ ನಾಥಂ ಚ ರುಚ್ಯಂ ಫಲಮ್।
ಮಾಧುರ್ಯೇಕ್ಷುರಸಂ ಘನಂ ಮಧುಸುಧಾಸಾರಂ ಹರಿಂ ನಿರ್ಮದಾ–
ಸ್ಸ್ತುತ್ವಾ ಸಮ್ಪ್ರಮನೃತ್ತಸಕ್ತಹೃದಯಾಃ ಪ್ರಾಜ್ಞಾಸ್ಸುಶೀಲಾನ್ವಿತಾಃ॥

ತಾ॥ ಮಾನುಷ ದೇವ ತಿರ್ಯಗಾದಿ ಸಮಸ್ತರೂಪಗಳನ್ನೂ ಧರಿಸಿ ಆಶ್ಚರ್ಯಕರವಾದ ಅವತಾರಗಳನ್ನು ಮಾಡಿದ ಕ್ಷೀರಾಬ್ಧಿಶಾಯಿಯಾದ ಭಗವಂತನು ಪಕ್ವಫಲದಂತೆಯೂ, ಬೆಲ್ಲದಗಟ್ಟಿಯಂತೆಯೂ, ಜೇನುತುಪ್ಪದಂತೆಯೂ, ಅಮೃತದಂತೆಯೂ ಅತ್ಯಂತ ಭೋಗ್ಯನಾಗಿರುವುದರಿಂದ, ಇವನನ್ನು ಉದಾರಬುದ್ಧಿಯಿಂದ ಸ್ತೋತ್ರಮಾಡಿ ನರ್ತನಮಾಡುವವರೇ ಸಕಲಶಾಸ್ತ್ರಸಾರಜ್ಞರು. (ಹೀಗೆ ನರ್ತನಮಾಡೋಣವೇ ಸರ್ವಶಾಸ್ತ್ರಜ್ಞಾನಫಲವೆಂದು ಭಾವವು.)

(೭) ನೀರ್ಮೈಯಿಲ್ ನೂಱ್ಱುವರ್ ವೀಯ ಐವರ್ಕ್ಕರುಳ್
ಶೆಯ್ದು ನಿನ್ಱು,
ಪಾರ್ಮಲ್ಕು ಶೇನೈಯವಿತ್ತ ಪರಂಶುಡರೈ ನಿನೈನ್ದಾಡಿ.
ನೀರ್ಮಲ್ಕು ಕಣ್ಣಿನರಾಕಿ ನೆಞ್ಜಮ್ಕುೞೈನ್ದು ನೈಯಾದೇ,
ಊನ್ಮಲ್ಕಿ ಮೋಡುಪರುಪ್ಪಾರುತ್ತಮರ್ಕಳ್ಕ್ಕೆನ್
ಶೆಯ್ವಾರೇ.

ಪ್ರ|| ನೀರ್ಮೈ ಇಲ್-ಸದ್ಗುಣ (ಉದಾರಸ್ವಭಾವ) ವಿಲ್ಲದ, ನೂಱ್ಱುವರ್-ದುರ್ಯೋಧನಾದಿಗಳು ನೂರುಮಂದಿಯೂ, ವೀಯ-ನಾಶಹೊಂದುವಂತೆ, ಐವರ್ಕ್ಕು-ಪಾಂಡವರಿಗೆ ಐದುಮಂದಿಗೂ, ಅರುಳ್ಶೆಯ್ದು – ಅತ್ಯನ್ತಕೃಪೆಮಾಡಿ, ನಿನ್ಱು-ಅವರಿಗೆ ಸಕಲವಿಧ ಬನ್ಧುವಾಗಿ ನಿಂತು, ಪಾರ್ಮಲ್ಕು-ಭೂಮಿಯೆಲ್ಲಾ ತುಂಬುವಂತೆ ಅಸಂಖ್ಯಾತವಾದ, ಶೇನೈ-ಸೈನ್ಯವನ್ನು, ಅವಿತ್ತ – ನಾಶಪಡಿಸಿದ, ಪರಂಶುಡರೈ-ನಿರವಧಿಕ ದಿವ್ಯತೇಜೋನಿಧಿಯನ್ನು, ನಿನೈನ್ದು – ಧ್ಯಾನಮಾಡಿ, ಆಡಿ-(ಪ್ರೇಮಪರವಶರಾಗಿ) ನರ್ತನಮಾಡಿ, ನೀರ್ಮಲ್ಕು-ಆನನ್ದಬಾಷ್ಪಭರಿತವಾದ, ಕಣ್ಣಿನರಾಕಿ – ಕಣ್ಣುಗಳುಳ್ಳವರಾಗಿ, ನೆಞ್ಜಮ್-(ಧ್ಯಾನಮಾಡಿದ) ಹೃದಯವು, ಕುೞೈನ್ದು-ಶಿಥಿಲವಾಗಿ (ಕರಗಿ), ನೈಯಾದೇ – ರೋಮಾಂಚಾದಿಗಳಿಂದ ಶಿಥಿಲ ಶರೀರರಾಗದೆ, ಊನ್ಮಲ್ಕಿ-ಮಾಂಸವು ಬೆಳೆಯುವಂತೆ (ಪುಷ್ಟಶರೀರರಾಗುವಂತೆ), ಮೋಡುಪರುಪ್ಪಾರ್ – ಉದರಭರಣವಂ ಮಾಡುವವರು, ಉತ್ತಮರ್ಕಳ್ಕು – ಜ್ಞಾನಾಧಿಕರಾದ ಉತ್ತಮಭಾಗವತರಿಗೆ, ಎನ್ಶೆಯ್ವಾರ್-ಯಾವವಿಧವಾಗಿ ಉಪಕರಿಸಬಲ್ಲರು ? (ಅನುಪಯುಕ್ತರೆಂದು ಭಾವವು.)

( ಸ-ಗಾ-ರ || )—

ದುಶ್ಶೀಲಾತ್ಮಶತಾನ್ತಕಂ ಚ ಕೃಪಯಾ ಪಞ್ಚಾತ್ಮನಾಂ ಪಾಲಕಂ
ಬನ್ಧುಂ ಸರ್ವಚಮೂವಿನಾಶಮಸಮಂ ಜ್ಯೋತಿಃ ಪರಂ ಶ್ರೀಧರಮ್।
ಸ್ಮೃತ್ವಾ ನೃತ್ತರತಾಸ್ಸಬಾಷ್ಪನಯನಾ ನೈವಾರ್ದ್ರಚಿತ್ತಾಶ್ಚ ಯೇ
ಮೇದೋವೃದ್ಧಿಕರೈಸ್ಸದೋದರಭರೈಃ ಕಿಂ ಸ್ಯಾತ್ಫಲಂ ತೈಸ್ಸತಾಮ್? ||

ತಾ|| ದುರ್ಯೋಧನಾದಿಗಳು ನೂರುಮಂದಿ ದುಷ್ಟರೂ ನಾಶಹೊಂದುವಂತೆ ಐದುಮಂದಿ ಪಾಂಡವರಿಗೂ ಕೃಪೆಯಿಂದ ಉಪಕಾರಮಾಡಿ ಸಕಲವಿಧ ಬನ್ಧುವಾಗಿ ನಿಂತು ಸರ್ವಸೈನ್ಯನಾಶಕನಾದ ದಿವ್ಯತೇಜೋಮೂರ್ತಿಯನ್ನು ಧ್ಯಾನಮಾಡಿ

ನರ್ತನಮಾಡುತ್ತ, ಆನನ್ದಬಾಷ್ಪಭರಿತರಾಗಿ ಶರೀರಶೈಥಿಲ್ಯವಂ ಪಡೆಯದೆ, ವೃಥಾ ಉದರಭರಣದಿಂದ ದೇಹಪುಷ್ಟಿಯನ್ನು ಪಡೆಯುವವರು ಜ್ಞಾನಾಧಿಕರಾದ ಭಾಗವತರ ಸನ್ನಿಧಿಯಲ್ಲಿ ಯಾವವಿಧವಾದ ಉಪಕಾರಮಾಡಬಲ್ಲರು? (ಅವರ ಜನ್ಮವು ವ್ಯರ್ಥವೆಂದು ಭಾವವು.)

(೮) ವಾರ್‌ಪುನಲನ್ತಣ್ಣರುವಿ ವಡತಿರುವೇಙ್ಗಡತ್ತೆನ್ದೈ,
ಪೇರ್‌ಪಲಶೊಲ್ಲಿ ಪ್ಪಿದಱ್ಱಿ ಪ್ಪಿತ್ತರೆನ್ಱೇ ಪಿಱರ್ ಕೂಱ
ಊರ್‌ಪಲ ಪುಕ್ಕುಮ್ ಪುಕಾದುಮುಲೋಕರ್ ಶಿರಿಕ್ಕ ನಿನ್ಱಾಡಿ,
ಆರ್ವಮ್‌ಪೆರುಕಿ ಕ್ಕುನಿಪ್ಪಾರಮರರ್ ತೊೞಪ್ಪಡುವಾರೇ

ಪ್ರ|| ವಾರ್ ಪುನಲ್–ಮೇಲಿಂದ ಬೀಳುತ್ತಿರುವ ಜಲಧಾರೆಗಳುಳ್ಳ, ಅಮ್–ರಮಣೀಯವಾದ, ತಣ್ – ಶೀತಳವಾದ, ಅರುವಿ – ಪ್ರವಾಹಗಳುಳ್ಳ, ವಡಕ್ಕು–(ತಮಿೞುನಾಡಿಗೆ) ಉತ್ತರಸೀಮೆಯಾದ, ತಿರುವೇಙ್ಗಡತ್ತು–ಶ್ರೀವೇಂಕಟಾದ್ರಿಯಲ್ಲಿ ನಿಂತಿರುವ, ಎನ್ದೈ–ನಮ್ಮ ಸ್ವಾಮಿಯ, ಪೇರ್ ಪಲಶೊಲ್ಲಿ – ನಾಮಧೇಯಗಳನ್ನು ಅನೇಕವಾಗಿ ಹೇಳಿ, ಪಿದಱ್ಱಿ – ಅಕ್ರಮವಾಗಿ ಏನೇನೋ ಹೇಳುತ್ತ, ಪಿಱರ್ ಪಿತ್ತರೆನ್ಱೇಕೂಱ–ಇತರರು ಇವರನ್ನು ಹುಚ್ಚರೆಂದು ಕರೆಯುವಂತೆ, ಪಲ ಊರ್–(ಮನುಷ್ಯರು ಸಂಚರಿಸುವ) ಅನೇಕ ಗ್ರಾಮನಗರಗಳಲ್ಲಿ, ಪುಕ್ಕುಮ್–ಪ್ರವೇಶಿಸಿಯೂ, ಪುಕಾದುಮ್–ಮನುಷ್ಯಸಂಚಾರವಿಲ್ಲದ ಸ್ಥಲಗಳಲ್ಲೂ, ಉಲೋಕರ್ ಶಿರಿಕ್ಕ–ಲೌಕಿಕರು ನಗುವಂತೆ, ನಿನ್ಱು–(ಪರವಶರಾಗಿ) ನಿಂತು, ಆಡಿ–ಸಂಚರಿಸಿ, ಆರ್ವಮ್ ಪೆರುಕಿ–ಪ್ರೀತಿಯು ಉತ್ಕಟವಾಗಿ ಪ್ರವಹಿಸಿ, ಕುನಿಪ್ಪಾರ್–ಸಸಂಭ್ರಮವಾಗಿ ನರ್ತನಮಾಡುವವರು, ಅಮರರ್–ನಿತ್ಯಾನುಭವಮಾಡುವ ದಿವ್ಯಸೂರಿಗಳಿಂದ, ತೊೞಪ್ಪಡುವಾರ್–ಆದರಿಸಲ್ಪಡುವರು.

( ಸ–ಗಾ–ರ || )—

ರಮ್ಯಾದ್ರೋರ್ಧ್ವೋತ್ತರವೇಙ್ಕಟಾಚಲಪತೇರ್ನಾಮ್ನಾಂ ಸಹಸ್ರೈಸ್ತ್ವಯಂ
ಸ್ತುತ್ವಾ ಚಾಕ್ರಮತಶ್ಚರನ್ತಿ ನಗರೇ ಯೇ ಕಾನನೇ ವಾ ಜನಾಃ |
ಉನ್ಮತ್ತಾ ಇವ ನೃತ್ತಸಕ್ತಹೃದಯಾ ಲೋಕೈಃ ಪರೀಹಾಸ್ಯತಾಂ
ಪ್ರಾಪ್ತಾಸ್ತೇ ಹಿ ಭವನ್ತಿ ದಿವ್ಯನಿಲಯೈಸ್ಸೇವ್ಯಾಸ್ತ್ವಯಂ ಸೂರಿಭಿಃ ||

ತಾ|| ಶ್ರೀ ವೇಂಕಟಾದ್ರಿಯಲ್ಲಿ ನಿಂತಿರುವ ನಮ್ಮ ಸ್ವಾಮಿಯ ಅನೇಕ ಸಹಸ್ರನಾಮಾವಳಿಗಳನ್ನು ಅಕ್ರಮವಾಗಿ ಮನಸ್ಸುಬಂದಹಾಗೆ ಹೇಳುತ್ತ, ಇತರರು

ತಮ್ಮನ್ನು ಹುಚ್ಚರೆಂದು ಕರೆಯುವಂತೆ ಗ್ರಾಮನಗರಾದಿಗಳಲ್ಲೂ ವನಪ್ರದೇಶಗಳಲ್ಲೂ ಸಂಚರಿಸುತ್ತ, ಅತ್ಯುತ್ಕಟಪ್ರೀತಿಯಿಂದ ನರ್ತನಮಾಡುವವರು ದಿವ್ಯಸೂರಿಗಳಿಂದಲೂ ಆದರದಿಂದ ಸೇವ್ಯರಾಗುವರು.

(೯) ಅಮರರ್ತೊೞಪ್ಪಡುವಾನ್ನೈ ಯನ್ನೈತ್ತುಲಕುಕ್ಕುಮ್
ಪಿರಾನ್ನೈ,
ಅಮರ ಮನತ್ತಿನುಳ್ ಯೋಗುಪುಣರ್ನ್ದವನ್ ತನ್ನೋಡೊನ್ರಾಕ,
ಅಮರ ತ್ತುಣಿಯವಲ್ಲಾರ್ಕಳೊೞಿಯವಲ್ಲಾದವರೆಲ್ಲಾಮ್,
ಅಮರ ನಿನ್ನೈನ್ದೆೞುನ್ದಾಡಿ ಯಲಱ್ಱುವದೇ ಕರುಮಮೇ.

ಪ್ರ॥ಅಮರರ್-ನಿತ್ಯಸೂರಿಗಳಿಗೆ, ತೊೞಪ್ಪಡುವಾನ್ನೈ-ಸಂಸೇವ್ಯನಾದವನನ್ನು, ಅನ್ನೈತ್ತುಲಕುಕ್ಕುಮ್ ಪಿರಾನ್ನೈ – ಸಕಲಲೋಕಗಳಿಗೂ ಸ್ವಾಮಿಯಾದವನನ್ನು, ಅಮರ-ಸ್ಥಿರವಾಗಿ, ಮನತ್ತಿನುಳ್-ಮನಸ್ಸಿನಲ್ಲಿ, ಯೋಗುಪುಣರ್ನ್ದು-ಯೋಗದ್ವಾರಾಸಮೀಪಿಸಿ (ಆಶ್ರಯಿಸಿ), ಅವನ್‌ತನ್ನೋಡೊನ್ರಾಕ- ಅವನೊಡನೆ ಪರಮಸಾಮ್ಯವನ್ನು ಹೊಂದುವಂತೆ, ಅಮರ-ಸೇರಲು, ತುಣಿಯವಲ್ಲಾರ್ಕಳ್-ದೃಢಾಧ್ಯವಸಾಯಮಾಡಬಲ್ಲವರು (ಅನ್ತಹ ಅತ್ಯನ್ತಭಕ್ತಿಯುಕ್ತರು), ಒೞಿಯ-ಅಲ್ಲದೆ, ಅಲ್ಲಾದವರ್ ಎಲ್ಲಾಮ್-ಮಿಕ್ಕವರೆಲ್ಲರೂ, ಅಮರ ನಿನ್ನೈನ್ದು-ಇದರಲ್ಲಿ ಸೇರಬೇಕೆಂದು ಆಲೋಚಿಸಿ, ಎೞುನ್ದು ಆಡಿ – ಎದ್ದು ಅವರಂತೆ ನರ್ತನವಾಡಿ, ಅಲಱ್ಱುವದೇ- ಸ್ತೋತ್ರಮಾಡೋಣವೇ, ಕರುಮಮ್-ಕರ್ತವ್ಯವು.

(ಸ–ಗಾ–ರ ॥)—

**ದಿವ್ಯೈಃಸೂರಿವರೈಃ ಸೇವ್ಯಮಖಿಲಭ್ರಾಜಜ್ಜಗನ್ನಾಯಕಂ**
**ಯೋಗಧ್ಯಾನಪರಾ ವಿಧಾಯ ಹೃದಯೇ ಯೇ ಸನ್ತಿ ಸಾಯುಜ್ಯಗಾಃ ।**
**ತಾನೇತಾಂಸ್ತು ವಿನಾ ಸಮಸ್ತಜಗತಾಂ ಕರ್ತವ್ಯಮೇವಾನಿಶಂ**
**ಶ್ರೀಶಪ್ರಾಪ್ತಿಕೃತೇ ಹಿ ನರ್ತನಮಿಹೋತ್ಪ್ಲುತ್ಯಾಪ್ಯಹೋ! ಧಾವನಮ್॥**

ತಾ॥ ನಿತ್ಯಸೂರಿಸಂಸೇವ್ಯನಾದ ಸಕಲಲೋಕನಾಯಕನನ್ನು ಯೋಗಮಾರ್ಗದಿಂದ ಧ್ಯಾನಮಾಡಿ ಆಶ್ರಯಿಸಿ, ಪರಮಸಾಮ್ಯವಂಹೊಂದಲು ದೃಢಾಧ್ಯವಸಾಯವುಳ್ಳವರನ್ನು ಹೊರತು ಮಿಕ್ಕವರೆಲ್ಲರೂ ಅತ್ಯವಶ್ಯವಾಗಿ ಅವನನ್ನು ನರ್ತನದೊಡನೆ ಸ್ತೋತ್ರಮಾಡೋಣವೇ ನ್ಯಾಯವು (ಇದೇ ಎಲ್ಲರಿಗೂ ಕರ್ತವ್ಯವೆಂದು ಭಾವವು) —ಕೈವಲ್ಯನಿಷ್ಠರನ್ನು ನಿಂದಿಸಿ ಭಗವದ್ಗುಣಾನುಭವನಿಷ್ಠರನ್ನು ಶ್ಲಾಘಿಸಿರುತ್ತಾರೆಂದು ಭಾವವು.)

(೧೦) ಕರುಮಮುಮ್ ಕರುಮಪಲನುಮಾಕಿಯ ಕಾರಣನ್ತನ್ನೈ,
ತ್ತಿರುಮಣಿವಣ್ಣನೈ ಚ್ಚೆಙ್ಗಣ್ಮಾಲಿನೈ ತ್ತೇವಪಿರಾನೈ,
ಒರುಮೈ ಮನತ್ತಿನುಳ್ ವೈತ್ತುಳ್ಳಮ್ ಕುೞೈನ್ದೆೞುನ್ದಾಡಿ,
ಪೆರುಮೈಯುಮ್ ನಾಣುಮ್ ತವಿರ್ನ್ದು ಪಿದಱ್ಱುಮಿನ್
ಪೇದೈಮೈತೀರ್ನ್ದೇ

ಪ್ರ॥ಕರುಮಮುಮ್-(ಸಾಧನರೂಪವಾದ) ಕರ್ಮಗಳೂ, ಕರುಮಪಲನುಮ್-ಆಕರ್ಮಗಳ ಫಲಗಳೂ, ಆಕಿಯ ಕಾರಣತನ್ನೈ-ತಾನೇ ಆಗಿ ನಿಂತ ಸಮಸ್ತ ಕಾರಣ ಭೂತನನ್ನು, ತಿರು-(ತನ್ನನ್ನೇ ಉಪಾಯವಾಗಿಯೂ ಉಪೇಯವಾಗಿಯೂ ಆಶ್ರಯಿಸುವವರಿಗೆ) ದರ್ಶನೀಯವಾದ, ಮಣಿ-ಮಾಣಿಕ್ಯದಂತೆ ಇರುವ, ವಣ್ಣನೈ-(ಶುಭಾಶ್ರಯವಾದ) ದಿವ್ಯ ಶರೀರವುಳ್ಳವನನ್ನು, ಶೆಮ್ ಕಣ್ ಮಾಲಿನೈ-ರಕ್ತಲೋಚನನಾದ (ವಾತ್ಸಲ್ಯವುಳ್ಳ) ಸ್ವಾಮಿಯನ್ನು, ತೇವಪಿರಾನೈ - ದೇವದೇವನನ್ನು, ಒರುಮೈ-ನಿಶ್ಚಯವುಳ್ಳ, ಮನತ್ತಿನುಳ್-ಮನಸ್ಸಿನಲ್ಲಿ, ವೈತ್ತು-ಇಟ್ಟು, ಉಳ್ಳಮ್-ಕುೞೈನ್ದು-ಶಿಥಿಲ ಹೃದಯರಾಗಿ, ಎೞುನ್ದು ಆಡಿ-ಮೇಲಕ್ಕೆ ಹಾರಿ ನರ್ತನಮಾಡಿ ಪೆರುಮೈಯುಮ್ ನಾಣುಮ್ - (ನಿಮ್ಮ) ಸ್ವಾಭಿಮಾನವನ್ನೂ ಲಜ್ಜೆಯನ್ನೂ, ತವಿರ್ನ್ದು-ಬಿಟ್ಟು, ಪೇದೈಮೈತೀರ್ನ್ದು-(ಇಂತಹ ಪಾರವಶ್ಯವು ನಿಕೃಷ್ಟವೆಂದು ಭಾವಿಸುವ) ಅಜ್ಞಾನವನ್ನು ತ್ಯಜಿಸಿ, ಪಿದಱ್ಱುಮಿನ್ - (ಅವನ ಕಲ್ಯಾಣಗುಣಗಳನ್ನು) ಮನಸ್ಸು ಬಂದಹಾಗೆಲ್ಲಾ ಹೇಳಿರಿ.

( ಸ-ಗಾ-ರ ॥ )—

ಕರ್ಮಾಣ್ಯೇವ ಚ ಸರ್ವಕರ್ಮಫಲಮಪ್ಯೇಷೋಽಯಮಾದ್ಯಂ ಸ್ವಯಂ
ಸರ್ವೇಷಾಮಪಿ ಕಾರಣಂ ಚ ವಿಲಸನ್ಮಾಣಿಕ್ಯವರ್ಣೋ ಹರಿಃ ।
ಪದ್ಮಾಕ್ಷಂ ಹೃದಿದೇವದೇವಮಿಮಮೇವಾರಾಧ್ಯ ನೃತ್ತಾದಿಭಿ.
ನಿರ್ಲಜ್ಜಾ ವಿಹರನ್ತು ಭಕ್ತಿಭರಿತಾಶ್ಯಂಸನ್ತು ತಂ ಚಾತ್ಮನಾತ್ ॥

ತಾ॥ (ಕೇವಲರಂತೆ ಇರದೆ, ಅನನ್ಯಪ್ರಯೋಜನರಾಗಿ ಶ್ರೀ ಭಗವದ್ಗುಣಾನುಭವನಿಷ್ಠರಾಗಿ ಕೃತಾರ್ಥರಾಗಿರಿ-ಎಂದು ಉಪದೇಶಿಸುತ್ತಾರೆ.) ಸಕಲಕರ್ಮಗಳೂ ಕರ್ಮಫಲಗಳೂ ತಾನೇ ಆಗಿ ನಿಂತಿರುವ ಸರ್ವಕಾರಣಭೂತನಾದ ಮಾಣಿಕ್ಯವರ್ಣನಾದ ಅಂಬುಜಾಕ್ಷನಾದ ದೇವಾಧಿದೇವನನ್ನು ಮನಸ್ಸಿನಲ್ಲಿ ಸ್ಥಿರವಾಗಿ ಇಟ್ಟು ಶಿಥಿಲಹೃದಯರಾಗಿ ನರ್ತನಮಾಡುತ್ತ, ನಿಮ್ಮ ಸ್ವಾಭಿಮಾನಲಜ್ಜಾದಿಗಳನ್ನೂ ಬಿಟ್ಟು ಅವನ ಕಲ್ಯಾಣಗುಣಗಳನ್ನೇ ಮನಸ್ಸುಬಂದಹಾಗೆಲ್ಲಾ ಸಂಕೀರ್ತನ ಮಾಡಿರಿ.

(೧೧) ಶೀರ್ನ್ದ ವಡಿಯವರ್ತಮ್ಮೈ ತ್ತಿರುತ್ತಿ ಪ್ಪಣಿಕೊಳ್ಳವಲ್ಲ,
ಆರ್ನ್ದಪುಕಳ್ಅಚ್ಚುದನೈ ಯಮರರ್ಪಿರಾನೈ ಯಮ್ಮಾನೈ,
ವಾಯ್ನ್ದವಳವೆಯಲ್ಶೂಳ್ ತಣ್ವಳವೊ ಕುರುಕೂರ್
ಚ್ಚಡಕೋಪನ್,
ನೇರ್ನ್ದ ವೋರಾಯಿರತ್ತಿಪ್ಪತ್ತರುವಿನೈ ನೀಱುಶೆಯ್ಯುಮೇ.

ಪ್ರ|| ಶೀರ್ನ್ದ-(ಉಪಾಯವೂ ಉಪೇಯವೂ ಈಶ್ವರನೇ ಎಂದು) ನಿಶ್ಚಯಿಸಿರುವ, ಅಡಿಯವರ ತಮ್ಮೈ-ದಾಸಭೂತರನ್ನು (ಭಕ್ತರನ್ನು), ತಿರುತ್ತಿ-ಪರಿಷ್ಕರಿಸಿ, ಪಣಿಕೊಳ್ಳವಲ್ಲ-ನಿತ್ಯಕೈಂಕರ್ಯವನ್ನು ಸ್ವೀಕರಿಸಬಲ್ಲ, ಆರ್ನ್ದಪುಕಳ್-ಪರಿಪೂರ್ಣಗುಣಗಳುಳ್ಳ, ಅಚ್ಚುದನೈ-ಆಶ್ರಿತರನ್ನು ಕೈಬಿಡದೆ ಇರುವ, ಅಮರರ್ಪಿರಾನೈ ಅಮ್ಮಾನೈ-ನಿತ್ಯಸೂರೀಶ್ವರನಾದ ಸರ್ವೇಶ್ವರನನ್ನು (ಸ್ತೋತ್ರಮಾಡುವುದಕ್ಕಾಗಿ), ವಾಯ್ನ್ದ ವಳಮ್ವಯಲ ಶೂಳ್-ಚೆನ್ನಾಗಿ ಬೆಳೆದು ಇರುವ ಸಸ್ಯಕ್ಷೇತ್ರಗಳಿಂದ ಪರಿವೃತವಾದ, ತಣ್-ಶೀತಳವಾದ, ವಳಮ - ಸರ್ವಸಂಪತ್ಸಮೃದ್ಧವಾದ, ಕುರುಕೂರ್-ಕುರುಕಾಪುರಿಗೆ ನಿರ್ವಾಹಕರಾದ, ಶಡಕೋಪನ್ - ನಮ್ಮಾೞ್ವಾರ್ರು, ನೇರ್ನ್ದ-ಹೇಳಿದ (ರಚಿಸಿದ), ಓರ್-ಅದ್ವಿತೀಯವಾದ, ಆಯಿರತ್ತು-ಸಹಸ್ರ ಪದ್ಯಮಾಲೆಯೊಳು, ಇಪ್ಪತ್ತು-ಈದಶಕವು, ಅರುವಿನೈ - ಮಹಾಪಾಪಗಳನ್ನೂ, ನೀಱುಶೆಯ್ಯುಮೇ-ಭಸ್ಮಮಾಡುವುವಷ್ಟೆ.

( ಸ-ಗಾ-ರ- || )—

ದಾಸ್ಯೇ ಭಕ್ತಗಣಾನ್ನಿಯೋಜ್ಯ ಸಕಲೈಃ ಪೂರ್ಣಂ ಗುಣೈರಚ್ಯುತಂ
ದೇವಾನಾಮಧಿದೇವಮೀಶ್ವರಮಯಂ ಶ್ರೀಶಂ ಶಠಾರಿರ್ಮುನಿಃ |
ಅಸ್ತಾವೀತ್ಕುರುಕಾಪುರಸ್ಯ ವಿಲಸತ್ಸಸ್ಯಾವೃತಸ್ಯ ಪ್ರಭು-
ಸ್ಸಾಹಸ್ರೇ ದಶಕಂ ತದೇತದಖಿಲಂ ಹನ್ಯಾನ್ಮಹಾಪಾತಕಮ್.

ತಾ|| ಶ್ರೀಭಗವನ್ತನೇ ಉಪಾಯವೂ ಉಪೇಯವೂ ಎಂದು ನಿಶ್ಚಯವುಳ್ಳ ಭಕ್ತರನ್ನು ತಿದ್ದಿ ಅವರಿಂದ ಕೈಂಕರ್ಯವನ್ನು ಸ್ವೀಕರಿಸಬಲ್ಲ ಕಲ್ಯಾಣಗುಣಪೂರ್ಣನಾದ ನಿತ್ಯ ಸೂರೀಶ್ವರನಾದ ಅಚ್ಯುತನನ್ನು ಸ್ತೋತ್ರಮಾಡಲು ಶ್ರೀ ಕುರುಕಾಪುರೀನಿರ್ವಾಹಕರಾದ ನಮ್ಮಾೞ್ವಾರ್ರು ರಚಿಸಿರುವ ಸಹಸ್ರ ಪದ್ಯಾವಳಿಯಲ್ಲಿ ಈ ದಶಕವು ಅನುಸನ್ಧಾನಮಾಡುವವರ ಸಕಲವಿಧ ಮಹಾ ಪಾಪಗಳನ್ನೂ ಭಸ್ಮಮಾಡಿ ರಕ್ಷಿಸುವುದೆಂದು ಫಲಶ್ರುತಿಯು ಹೇಳಲ್ಪಟ್ಟಿದೆ.

( ದ್ರ–ಉ–ಸಂ ॥ )—

ಪೂರ್ವೇಣ ದಾಸ್ಯವಿಧಿನಾ ಪುರುಷಾರ್ಥಸೀಮ್ನಾ
ಹರ್ಷಪ್ರಕರ್ಷವಿವಶಃ ಖಲು ಪಞ್ಚಮೇ ಸಃ ।
ಆನನ್ದನೈರವಿಕೃತಾನ್ ವಿನಿನಿನ್ದ ಮೂರ್ಖಾನ್
ಶೌರೇರ್ಗುಣೈಸ್ತು ವಿಕೃತಾನ್ ಪ್ರಶಶಂಸ ಭೂಯಃ ॥

( ದ್ರ–ಉ–ತಾ–ರ ॥ )—

ಗ್ರಾಹಗ್ರಸ್ತೇಭಮೋಕ್ಷೇ ಸುರರಿಪುದಮನೇ ಗೋಕುಲತ್ರಾಣಕಾರ್ಯೇ
ಗೋದಾರ್ಥೋಕ್ಷಾವಮರ್ದೇ ಸದಹಿತಮಥನೇ ಸಿನ್ಧುಪರ್ಯಙ್ಕಯೋಗೇ ।
ಕ್ಷೋಣೀಭಾರವ್ಯಪೋಹೇ ಕ್ಷಿತಿಧರವಸತೌ ನಿರ್ಜರಾರಾಧ್ಯತಾಯಾಂ
ವಿಶ್ವಾರಮ್ಭೇ ಚ ಶೌರೇಶ್ಶುಭತನುಸುಷಮೋನ್ಮಾದಕತ್ವಂ ಜಗಾದ ॥

(ಈ ಪಂಚಮದಶಕದ ಸಾರಾಂಶ.)

ಈ ಐದನೆಯ ದಶಕದಲ್ಲಿ–ಶ್ರೀ ಶಠಾರಿ ಮುನಿವರ್ಯರು–ಭಗವನ್ತನ ಆಪನ್ನಿವಾರಕತ್ವವನ್ನೂ, ಅಸುರನಿರಸನ ಸಾಮರ್ಥ್ಯವನ್ನೂ, ಆರ್ತಸಂರಕ್ಷಣವನ್ನೂ, ಅಭಿಮತ ವಿರೋಧಿನಿವರ್ತಕತ್ವವನ್ನೂ, ಅವತಾರಪ್ರಯೋಜನವನ್ನೂ, ಅತಿಶಯಿತ ಭೋಗ್ಯತೆಯನ್ನೂ, ಆಶ್ರಿತಪಕ್ಷಪಾತವನ್ನೂ, ಅರ್ಚಾವತಾರ ಸೌಲಭ್ಯವನ್ನೂ, ಉಭಯವಿಭೂತಿನಾಥತ್ವವನ್ನೂ, ವಿಲಕ್ಷಣ ವಿಗ್ರಹಯೋಗವನ್ನೂ, ಅನುಸನ್ಧಾನ ಮಾಡಿ ಪ್ರೀತಿಪ್ರಕರ್ಷದಿಂದ ಹಾಡಿ ಸಸಂಭ್ರಮ ನರ್ತನಾದಿಗಳನ್ನು ಮಾಡದೆ ಇರುವವರನ್ನು ವೃಥಾಜಾತರೆಂದು ನಿನ್ದಿಸಿ, ಹಾಗೆ ಗಾನನರ್ತನಾದಿಗಳನ್ನು ಮಾಡುವವರನ್ನು ಶ್ಲಾಘಿಸಿ, ಇಂತಹ ಶೇಷತ್ವದ ಸ್ವಾರಸ್ಯವನ್ನು ಪ್ರತಿಪಾದಿಸಿ ಇರುತ್ತಾರೆ

ಶ್ರೀಃ

# ತೃತೀಯಶತಕದಲ್ಲಿ—ಷಷ್ಠದಶಕ.

## (ಶೆಯ್ಯತಾಮರೈ)—

( ಈ ದಶಕದಲ್ಲಿ — ಪರವ್ಯೂಹವಿಭವಾನ್ತರ್ಯಾಮ್ಯವತಾರಗಳಿಗಿಂತ ಅರ್ಚಾವತಾರಕ್ಕೆ ಉಂಟಾದ ಸೌಲಭ್ಯವು ವರ್ಣಿಸಲ್ಪಡುತ್ತದೆ).

---

(೧) ಶೆಯ್ಯತಾಮರೈ ಕ್ಕಣ್ಣನಾಯುಲಕೇೞುಮುಣ್ಡವನ್
ಕಣ್ಡೀರ್,
ವೈಯಮ್ ವಾನಮ್ ಮನಿಶರ್ ದೆಯ್ವಮ್ ಮಱ್ಱುಮ್
ಮಱ್ಱುಮ್ ಮಱ್ಱುಮ್ ಮುಱ್ಱುಮಾಯ್,
ಶೆಯ್ಯಶೂೞ್ಶುಡರ್ ಞಾನಮಾಯ್, ವೆಳಿಪ್ಪಟ್ಟಿವೈ
ಪಡೈತ್ತಾನ್, ಪಿನ್ನುಮ್
ಮೊಯ್ಕೊಳ್ ಶೋದಿಯೋಡಾಯಿನಾನೊರು
ಮೂವರಾಕಿಯ ಮೂರ್ತ್ತಿಯೇ.

ಪ್ರ॥ ಶೆಯ್ಯತಾಮರೈ-ಕೆಂದಾವರೆಯಂತೆ, ಕಣ್ಣನಾಯ್ – ಕಣ್ಣುಗಳುಳ್ಳ, ಉಲಕು ಏೞುಮ್-ಸಪ್ತಲೋಕಗಳನ್ನೂ (ಸಕಲಲೋಕಗಳನ್ನೂ), ಉಣ್ಡ-ತನ್ನ ಉದರದಲ್ಲಿ ಧರಿಸಿದ, ಅವನ್‌ಕಣ್ಡೀರ್–ಅವನೇಯಲ್ಲವೇ, ಒರು–ಅದ್ವಿತೀಯವಾದ ಮೂವರಾಕಿಯಮೂರ್ತ್ತಿ–ಬ್ರಹ್ಮವಿಷ್ಣು ಶಿವಾತ್ಮಕಮೂರ್ತಿತ್ರಯಾನ್ತರ್ಯಾಮಿರೂಪಿಯಾಗಿ, ವೈಯಮ್–ಭೂಲೋಕವೂ, ವಾನಮ್–ಊರ್ಧ್ವಲೋಕವೂ, ಮನಿಶರ್–ಮನುಷ್ಯರೂ, ದೆಯ್ವಮ್–ದೇವತೆಗಳೂ, ಮಱ್ಱುಮ್ – ಮತ್ತೂ ತಿರ್ಯಗ್ಜಂತುಗಳೂ, ಮಱ್ಱುಮ್–ಮತ್ತೂ ಸ್ಥಾವರಗಳೂ, ಮಱ್ಱುಮ್–ಮತ್ತೂ ಭೂತಪಂಚಕವೂ, ಮಱ್ಱುಮ್ - ಮಹದಾದಿ ಸಮಷ್ಟಿಗಳೂ, ಆಯ್ - ಉಂಟಾಗುವಂತೆ ಉಪಾದಾನಕಾರಣವಾಗಿಯೂ, ಶೆಯ್ಯ–ರಮ್ಯವಾದ, ಶೂೞ್–ಸರ್ವವ್ಯಾಪಿಯಾದ, ಶುಡರ್‌ಞಾನಮಾಯ್ – ಪ್ರಕಾಶಮಾನವಾದ ಜ್ಞಾನವಾಗಿಯೂ, ವೆಳಿಪ್ಪಟ್ಟು–(ಸೃಷ್ಟಿಕಾಲದಲ್ಲಿ) ತೋರಿ, ಇವೈ ಪಡೈತ್ತಾನ್–ನಿಮಿತ್ತಕಾರಣವಾಗಿ ಇವುಗಳನ್ನೆಲ್ಲಾ ಸೃಷ್ಟಿಸಿ, ಪಿನ್ನುಮ್–ಅನನ್ತರ, ಮೊಯ್‌ಕೊಳ್ – ಸೇರಿಕೊಂಡಿರುವ, ಶೋದಿಯೋಡು – ತೇಜೋಮಯವಾದ ಪರಮಪದದೊಡನೆ, ಆಯಿನಾನ್ – ಕೂಡಿರುವವನು.

( ಸ-ಗಾ-ರ ॥ )—

**ಪದ್ಮಾಕ್ಷಃ ಪರಮಂ ಮಹಃ ಕಿಲ ಹರಿಸ್ಸಪ್ತಾಪಿ ಲೋಕಾನಯಂ**
**ಭುಞ್ಜಾನಃ ಪರಮೋಽದ್ವಿತೀಯವಿಭವೋ ಮೂರ್ತಿತ್ರಯಂ ಚ ಸ್ವಯಮ್**
**ರೋದಸ್ಯೌ ಮನುಜಾಸ್ಸುರಾಸ್ತದಿತರೇ ಚಾನ್ಯೇಽಪಿ ಚಾನ್ಯೇಽಪಿ ಚಾ-**
**ಪ್ಯನ್ಯೇ ಚೇತಿ ಸಮಸ್ತಕಾರಣಮಭೂಜ್ಜ್ಞಾನಂ ಜಗತ್ಸರ್ಗಕೃತ್ ॥**

ತಾ॥ (ಜಗತ್ಕಾರಣಭೂತನಾಗಿಯೂ ಪುಂಡರೀಕಾಕ್ಷತ್ವಾದಿವಿಶಿಷ್ಟನಾಗಿಯೂ ಇರುವ ಸರ್ವೇಶ್ವರನೇ ಸಮಾಶ್ರಯಣೀಯನೆಂದು ಹೇಳುತ್ತಾರೆ). ಸಕಲಲೋಕಗಳನ್ನೂ ಭಕ್ಷಿಸಿ ರಕ್ಷಿಸಿದವನೇ ಮೂರ್ತಿತ್ರಯಾನ್ತರಾತ್ಮನಾಗಿ ಭೂಲೋಕದ್ಯುಲೋಕಸುರನರತಿರ್ಯಕ್‌ಸ್ಥಾವರ ಪಂಚಭೂತಮಹದಾದಿ ಸೃಷ್ಟಿಗೆ ಉಪಾದಾನಕಾರಣವಾಗಿಯೂ, ದಿವ್ಯಜ್ಞಾನಾತ್ಮಕ ಸಂಕಲ್ಪಧರನಾಗಿ ನಿಮಿತ್ತಕಾರಣವಾಗಿಯೂ, ಪರಮಪದನಾಥನಾಗಿಯೂ ಇರುವ ಪುಂಡರೀಕಾಕ್ಷನು – ಇವನೇ ಸರ್ವಸಮಾಶ್ರಯಣೀಯನೆಂದು ಭಾವವು

(೨) ಮೂವರಾಕಿಯ ಮೂರ್ತ್ತಿಯೈ ಮುದಲ್ ಮೂವರ್
ಕ್ಕುಮ್ ಮುದಲ್ವನ್ ತನ್ನೈ!
ಶಾವಮುಳ್ಳನ ನೀಕ್ಕುವಾನ್ನೈ ತ್ತಡಙ್ಕಡಲ್ ಕಿಡನ್ದಾನ್
ತನ್ನೈ,
ತೇವತೇವನ್ನೈ ತ್ತೆನ್ನಿಲಙ್ಗೈ ಯೆರಿಯೆಶ್ಶೆಟ್ರ ವಿಲ್ಲಿಯೈ
ಪಾವನಾಶನ್ನೈ ಪ್ಪಙ್ಗಯತ್ತಡಙ್ಕಣ್ಣನ್ನೈ ಪ್ಪರವುಮಿನೋ.

ಪ್ರ॥ ಮೂವರಾಕಿಯಮೂರ್ತಿಯೈ-ಬ್ರಹ್ಮರುದ್ರೇನ್ದ್ರರೂ ತಾನೇ ಎಂಬಂತೆ ಅವರಿಗೆ ಶರೀರಿಯಾಗಿರುವವನನ್ನು, ಮುದಲ್ ಮೂವರ್‌ಕ್ಕುಮ್-ಲೋಕಪ್ರಧಾನರಾದ ಆವರು ಮೂವರಿಗೂ, ಮುದಲ್ವನ್‌ತನ್ನೈ-ಕಾರಣಭೂತನನ್ನು, ಶಾವಮ್ ಉಳ್ಳನ - ಅವರಿಗೆ ಬಂದ ಶಾಪಗಳನ್ನು, ನೀಕ್ಕುವಾನೈ - ನಾಶಪಡಿಸುವವನನ್ನು, ತಡಮ್‌ಕಡಲ್-ವಿಶಾಲವಾದ ಕ್ಷೀರಾಬ್ಧಿಯಲ್ಲಿ, ಕಿಡನ್ದಾನ್‌ತನ್ನೈ-ಶಯನಮಾಡಿರುವವನನ್ನು, ತೇವತೇವನ್ನೈ--ದೇವದೇವನನ್ನು, ತೆನ್ ಇಲಙ್ಗೈ ಎರಿಎೞ-ಲಂಕಾಪುರಿಯಲ್ಲಿ ಅಗ್ನಿಯು ಏಳುವಂತೆ, ಶೆಟ್ರ-ಶತ್ರುನಿರಸನಮಾಡಿದ, ವಿಲ್ಲಿಯೈ-ಧನುರ್ಧಾರಿಯನ್ನು, ಪಾವನಾಶನ್ನೈ-(ಸೇತುವಿನಲ್ಲಿ) ಪಾಪವಿನಾಶಕನಾದವನನ್ನು, ಪಙ್ಗಯತ್ತಡಙ್ಕಣ್ಣನ್ನೈ-ಕಮಲದಂತೆ ವಿಶಾಲವಾದ ನೇತ್ರಗಳುಳ್ಳವನನ್ನು, (ಈಪ್ರಕಾರ ಸರ್ವಸೇವ್ಯನಾದ ಭಗವನ್ತನನ್ನು) ಪರವುಮಿನ್- ಸ್ತೋತ್ರಮಾಡಿ ಆಶ್ರಯಿಸಿರಿ.

( ಸ-ಗಾ-ರ || )—

**ಯೋ ಮೂರ್ತಿತ್ರಯರೂಪ ಏವ ಪರಮಂ ಮೂಲಂ ತ್ರಯಸ್ಯಾಪಿ ಯ-**
**ಚ್ಛಾಪಘ್ನಶ್ಚ ಮಹೋದಧೌ ಚ ಶಯಿತೋ ದೇವಾಧಿದೇವೋಽಚ್ಯುತಃ |**
**ಲಙ್ಕಾಧ್ವಂಸಕರಂ ತವೇನ ಶರಣಂ ಕೋದಣ್ಡಪಾಣಿಂ ಹರಿಂ**
**ಪದ್ಮಾಕ್ಷಂ ಕಲುಷಾಪಹಂ ಭಜತ ಭೋಲೋಕಾಸ್ಸ್ವಭಕ್ತಿತಃ ||**

ತಾ|| (ಅವತಾರಕನ್ದವಾದ ಕ್ಷೀರಾಬ್ಧಿಯಲ್ಲಿ ಶಯನಮಾಡಿದವನೇ ಶ್ರೀರಾಮ ರೂಪಿಯಾಗಿ ಸರ್ವಸಮಾಶ್ರಯಣೀಯನೆಂದು ಹೇಳುತ್ತಾರೆ). ಬ್ರಹ್ಮರುದ್ರೇನ್ದ್ರಾದಿಗಳಿಗೂ ಕಾರಣಭೂತನಾಗಿ ಅವರಿಗೆ ಶಾಪವೋಚಕನಾಗಿ ಕ್ಷೀರಾಬ್ಧಿಯಲ್ಲಿ ಶಯನಮಾಡಿರುವ ದೇವದೇವನೇ ಲಂಕಾಧ್ವಂಸಕನಾದ ಕೋದಣ್ಡಪಾಣಿಯಾಗಿ ಪಾಪನಾಶಕನಾಗಿಯೂ ಪುಂಡರೀಕಾಕ್ಷನಾಗಿಯೂ ಇರುವುದರಿಂದ ಇವನನ್ನು ಭಜಿಸಿರಿ – ಎಂದು ಎಲ್ಲರಿಗೂ ಉಪದೇಶಿಸುತ್ತಾರೆ.

(೩) ಪರವಿ ವಾನವರೇತ್ತನಿನ್ರ ಪರಮನ್ನೈ ಪ್ಪರಂಶೋದಿಯ್ಯೈ,
ಕುರವೈಕೋತ್ತ ಕುಣ್ರಕನ್ನೈ ಮಣಿವಣ್ಣನ್ನೈ ಕ್ಕುಡಕ್ಕೂತ್ತನ್ನೈ,
ಅರವಮೇಱಿಯಲೈಕಡಲಮರುಮ್ ತುಯಿಲ್‌ಕೊಣ್ಡ
ವಣ್ಣಲೈ,
ಇರವುನನ್‌ಪಕಲುಮ್ ವಿಡಾದೆನ್ರುಮೇತ್ತುದಲ್ ಮನಮೇ
ವೈಮ್ಮಿನೋ.

ಪ್ರ|| ಪರವಿ-(ಗುಣಗಳನ್ನು) ವಿವರಿಸಿಹೇಳಿ, ವಾನವರ್ – ದೇವತೆಗಳು, ಏತ್ತ–ಸ್ತೋತ್ರಮಾಡಲು, ನಿನ್ರ-(ಅವರಿಗೆ ಪ್ರತ್ಯಕ್ಷನಾಗಿ) ನಿಂತ, ಪರಮನ್ನೈ – ಸರ್ವಶ್ರೇಷ್ಠನನ್ನು, ಪರಂಶೋದಿಯ್ಯೈ – ಪರಮ ಜ್ಯೋತಿಸ್ಸ್ವರೂಪನನ್ನು, ಕುರವೈ ಕೋತ್ತ–(ಗೋಪಕನ್ಯೆಯರೊಡನೆ) ರಾಸಕ್ರೀಡೆಮಾಡಿದ, ಕುಣ್ರಕನ್ನೈ-ಆಶ್ರಿತಭವ್ಯನನ್ನು, ಮಣಿವಣ್ಣನ್ನೈ-ಮಣಿವರ್ಣನನ್ನು, ಕುಡಕ್ಕೂತ್ತನ್ನೈ-ಕುಂಭಲೀಲಾಪರನನ್ನು, ಅರವಮ್ ಏಱಿ-ಶೇಷನಮೇಲೆ ಹತ್ತಿ, ಅಲೈಕಡಲ್ ಅಮರುಮ್ – ಅಲೆಗಳುಳ್ಳ ಸಮುದ್ರದಲ್ಲಿ (ಜಗದ್ರಕ್ಷಣಾರ್ಥವಾಗಿ) ಸೇರಿರುವ, ತುಯಿಲ್‌ಕೊಣ್ಡ–ನಿದ್ರೆಯನ್ನು ಸ್ವೀಕಾರಮಾಡಿದ, ಅಣ್ಣಲೈ – ಸ್ವಾಮಿಯನ್ನು, ನಲ್ ಇರವುಮ್ ಪಕಲುಮ್ – ಒಳ್ಳೆಯ (ಸ್ತೋತ್ರಮಾಡಲು ಅನುಕೂಲವಾದ) ರಾತ್ರಿಯೂ ಹಗಲೂ, ವಿಡಾದು–ಅವಿಚ್ಛಿನ್ನವಾಗಿ, ಎನ್ರುಮ್-ಯಾವಾಗಲೂ, ಏತ್ತುದಲ್ – ಸ್ತೋತ್ರಮಾಡುವುದರಲ್ಲಿ, ಮನಮ್–ಮನಸ್ಸನ್ನು, ವೈಮ್ಮಿನೋ- ಇಡಿರಿ.

( ಸ-ಗಾ.ರ || )—
ದೇವೈಸ್ಸಂಸೇವ್ಯಮಹಾಗುಣಂ ಚ ಪರಮಂ ಜ್ಯೋತಿಃ ಪರಂ ತಂ ಹರಿಂ
ರಾಸಕ್ರೀಡಿತಮಚ್ಯುತಂ ಮಣಿನಿಭಂ ಕುಮ್ಭಾದಿಲೀಲಾಧರಮ್ |
ಕೃಷ್ಣಂ ಶೇಷಶಯಂ ಪ್ರಭುಂ ಚ ಜಗತೀರಕ್ಷಾರ್ಥನಿಸ್ಸಾಧನಂ
ಸ್ತೋತುಂ ಯೂಯಮುಪರ್ಶಿತಂ ಚ ಸತತಂ ಸಂಸ್ಥಾಪಯಧ್ವಂ ಚಿತ್ತೇ ನಿಜೇ ||

ತಾ|| (ರಾಮಾವತಾರಕ್ಕಿಂತಲೂ ಕೃಷ್ಣಾವತಾರವು ಅತ್ಯನ್ತ ಸುಲಭವೆಂದು ಹೇಳುತ್ತಾರೆ.) ಸರ್ವದೇವ ಸಂಸೇವ್ಯನಾದ ಪರಮಜ್ಯೋತಿ ಸ್ವರೂಪನೇ ಕ್ಷೀರಾಬ್ಧಿಶಾಯಿಯಾಗಿದ್ದು ಕ್ರಮೇಣ ಅವತರಿಸಿ ಗೋಪಕನ್ಯೆಯರೊಡನೆ ರಾಸ ಕ್ರೀಡೆಮಾಡಿದ ಆಶ್ರಿತಸುಲಭನಾಗಿಯೂ, ಮಣಿವರ್ಣನಾಗಿಯೂ ಕುಂಭಲೀಲಾಪರ ನಾಗಿಯೂ ಇರುವ ಶ್ರೀಕೃಷ್ಣನಾದುದರಿಂದ, ಯಾವಾಗಲೂ ಇವನನ್ನೇ ಸ್ತೋತ್ರ ಮಾಡಿರಿ—ಎಂದು ಬೋಧಿಸುತ್ತಾರೆ.

(೪) ವೈಮ್ಮಿನುಮ್ಮನತ್ತೆನ್ರು ಯಾನುರೈಕ್ಕಿನ್ರ
ಮಾಯವರ್ನ ಶೀರ್ಮೈಯೈ,
ಎಮ್ಮನೋರ್ಗಳುರೈಪ್ಪದೆನ್ನದುನಿರ್ಕ್ಕ
ನಾಳ್ತೊರುಮ್,ವಾನವರ್
ತಮ್ಮೈಯಾಳುಮವನುಮ್ ನಾನ್ಮುಕನುಮ್
ಶಡೈಮುಡಿಯಣ್ಣಲುಮ್,
ಶೆಮ್ಮೈಯಾಲವರ್ನ ಪಾದಪಙ್ಕಯಮ್
ಶಿನ್ದಿತ್ತೇತ್ತಿತ್ತಿರಿವರೇ.

ಪ್ರ|| ನುಮ್‌ಮನತ್ತು – ನಿಮ್ಮ ಮನಸ್ಸಿನಲ್ಲಿ, ವೈಮ್ಮಿನ್–ಇಡಿರಿ, ಎನ್ರು – ಎಂದು, ಯಾನ್ ಉರೈಕ್ಕಿನ್ರ–ನಾನು ಹೇಳುವ, ಮಾಯವರ್ನ–ಆಶ್ಚರ್ಯಗುಣಚೇಷ್ಟಿತ ಗಳುಳ್ಳವನ, ಶೀರ್ಮೈಯೈ–ಮಹಾಶೀಲವನ್ನು, ಎಮ್ಮನೋರ್‌ಕಳ್ – ನಮ್ಮಂತೆ ಇರುವವರು, ಉರೈಪ್ಪದು–ಹೇಳೋಣವು, ಎನ್–ಯಾವುದು ? ಅದುನಿರ್ಕ್ಕ–ಅದು ಇರಲಿ. ವಾನವರ್ ತಮ್ಮೈ ಆಳುಮವನುಮ್–ದೇವತೆಗಳನ್ನು ಆಳುವ ಇಂದ್ರನೂ, ನಾನ್ಮುಕನುಮ್ – ಚತುರ್ಮುಖನೂ, ಶಡೈಮುಡಿಯಣ್ಣಲುಮ್ – ಜಟಾಧರನಾದ ರುದ್ರನೂ, ಶೆಮ್ಮೈಯಾಲ್–(ಶೇಷತ್ವಪೂರ್ವಕವಾದ) ಆರ್ಜವದಿಂದ, ಅವರ್ನ–

(ಶೇಷಿಯಾದ) ಅವನ, ಪಙ್ಕಯಪ್ಪಾದಮ್-ತಾವರೆಯಂತೆ ಇರುವ ಪಾದಗಳನ್ನು, ನಾಳ್ತೊಱುಮ್- ಪ್ರತಿದಿನವೂ, ಶಿನ್ದಿತ್ತು-ಚಿನ್ತಿಸಿ, (ಸ್ಮರಿಸಿ), ಏತ್ತಿ-ಸ್ತೋತ್ರ ಮಾಡಿ, ತಿರಿವರ್-ಸಂಚರಿಸುತ್ತಿರುವರು (ಆದುದರಿಂದ ಅವನನ್ನೇ ಆಶ್ರಯಿಸಿರಿ).

( ಸ-ಗಾ-ರ || )—

**ಯಃಷ್ಮಾಕಂ ಮನಸಿ ಸ್ವಯಂ ಕುರುತ ತನ್ಮಾಹಾತ್ಮ್ಯಮನ್ಯಾದೃಶಂ**
**ಮಾಯಾಚೇಷ್ಟಿತಭಾಸ್ವರಸ್ಯ ತು ಹರೇರಿತ್ಯೇವ ಕಿಂ ಮಾದೃಶೈಃ |**
**ವಕ್ತವ್ಯಂ ಭವತೀದಮಸ್ತು ತದಿದಂ ಬ್ರಹ್ಮೇನ್ದ್ರರುದ್ರಾದಯೋ**
**ದೇವಾಶ್ಚ ಪ್ರಣತಾಃ ಪದಾಬ್ಜಯುಗಳೇ ಶಂಸನ್ತಿ ಚೈನಂ ಸದಾ ||**

ತಾ|| (ಬ್ರಹ್ಮೇನ್ದ್ರ ರುದ್ರಾದಿಗಳಿಗೂ ಸುಲಭನಾಗಿ ಸೇವ್ಯನಾದ ಭಗವನ್ತನ ಸೌಶೀಲ್ಯವನ್ನು ವರ್ಣಿಸುತ್ತಾರೆ.) ನಾನು ಈಗ "ಆಶ್ರಯಿಸಿರಿ" ಎಂದು ಹೇಳುವ ಆಶ್ಚರ್ಯ ಗುಣಚೇಷ್ಟಿತನ ಸೌಶೀಲ್ಯಾತಿಶಯವನ್ನು ನಮ್ಮಂತಹ ಸಾಮಾನ್ಯರು ಪ್ರಶಂಸಿಸೋಣವು ಹಾಗಿರಲಿ! ದೇವತೆಗಳನ್ನೆಲ್ಲಾ ಆಳುವ ಇನ್ದ್ರನೂ, ಚತುರ್ಮುಖನೂ ಜಟಾಧರನಾದ ರುದ್ರನೂ ಕೂಡ ಸರ್ವಶೇಷಿಯಾದ ಅವನ ಪಾದಪದ್ಮಗಳನ್ನೇ ಸ್ತೋತ್ರಮಾಡಿ ಸಂಚರಿಸುತ್ತಿರುವರು. (ಆದುದರಿಂದ ನೀವೂ ಕೂಡ ಅವನನ್ನೇ ಆಶ್ರಯಿಸಿರಿ-ಎಂದು ಭಾವವು.)

(೨೧) ತಿರಿಯುಮ್ ಕಾಱ್ಱೋಡಕಲ್ವಿಶುಮ್ಬು ತಿಣ್ಣಿನ್ದಮಣ್ ಕಿಡನ್ದಕಡಲ್,
ಎರಿಯುಮ್ ತೀಯೋಡಿರುಶುಡರ್ ದೆಯ್ವಮ್ ಮಱ್ಱುಮ್ ಮಱ್ಱುಮ್ ಮುಱ್ಱುಮಾಯ್,
ಕರಿಯಮೇನಿಯನ್ ಶೆಯ್ಯತಾಮರೈಕ್ಕಣ್ಣನ್ ವಿಣ್ಣೋರಿತ್ತೈ,
ಶುರಿಯುಮ್ ಪಲ್ಕರುಙ್ಕುಞ್ಜಿ ಯೆಙ್ಗಳ್ ಶುಡರ್ಮುಡಿಯಣ್ಣಲ್ ತೋಱ್ಱಮೇ.

ಪ್ರ|| ಕರಿಯಮೇನಿಯನ್-ಶ್ಯಾಮಲಮೂರ್ತಿಯಾದವನೂ, ಶೆಯ್ಯತಾಮರೈಕ್ಕಣ್ಣನ್-ಕೆಂದಾವರೆಯಂತೆ ಕಣ್ಣುಗಳುಳ್ಳವನೂ, ವಿಣ್ಣೋರ್ ಇತ್ತೈ-ನಿತ್ಯಸೂರಿಗಳಿಗೆ ಸ್ವಾಮಿಯಾದವನೂ, ಶುರಿಯುಮ್-ಸುರುಳು ಸುರುಳಿಯಾಗಿ, ಪಲ್-ಅಲಗು ಅಲಗಾಗಿ (ಅಸಂಖ್ಯಾತವಾಗಿ), ಕರುಮ್-ಕಪ್ಪುಬಣ್ಣವುಳ್ಳ, ಕುಞ್ಜಿ-ಕೂದಲುಗಳುಳ್ಳವನೂ, ಎಙ್ಗಳ್ ಶುಡರ್ಮುಡಿ ಅಣ್ಣಲ್-ನಮ್ಮ ಉಜ್ಜ್ವಲವಾದ ಕಿರೀಟ

ವುಳ್ಳ ಸ್ವಾಮಿಯೂ—(ಆದ ಸರ್ವೇಶ್ವರನ), ತೋನ್ಱುಮ್ - ಆವಿರ್ಭಾವವು, ತಿರಿಯುಮ್ ಕಾಱ್ಱೊಡು-ಸದಾಗತಿಯಾದ ವಾಯುವೊಡನೆ, ಅಕಲ್‌ವಿಶುಮ್ಬು-ವಿಸ್ತೀರ್ಣವಾದ ಆಕಾಶವೂ, ತಿಣ್ಣ್ವಮಣ್-ಕಠಿನವಾದ ಭೂಮಿಯೂ, ಕಿಡನ್ದ ಕಡಲ್ - ಅಪಾರವಾಗಿರುವ ಸಮುದ್ರವೂ, ಎರಿಯುಮ್ ತೀಯೋಡು-ಊರ್ಧ್ವಜ್ವಾಲೆಯುಳ್ಳ ಅಗ್ನಿಯೊಡನೆ, ಇರುಶುಡರ್-ಚನ್ದ್ರಾದಿತ್ಯರೆಂಬ ಎರಡು ತೇಜೋಬಿಂಬರೂಪಿಯಾದವರೂ, ದೆಯ್ವಙ್ - ಮತ್ತು ಇತರ ದೇವತಾವರ್ಗವೂ, ಮಱ್ಱುಮ್-ಮತ್ತೂ ಮನುಷ್ಯರೂ, ಮಱ್ಱುಮ್ - ಮತ್ತೂ ತಿರ್ಯಗ್ಜಾತಿಗಳೂ ಮುಱ್ಱುಮಾಯ್- ಸ್ಥಾವರವರ್ಗವೂ ಮತ್ತೂ ಎಲ್ಲವೂ ಆಗಿರುವುದು.

( ಸ-ಗಾ-ರ || )—

**ಆವಿರ್ಭಾವ ಇಹಾಚ್ಯುತಸ್ಯ ತು ವಿಭೋಃ ಕೃಷ್ಣಸ್ಯ ನೀಲಾಮ್ಬುದ-**
**ಶ್ಯಾಮಸ್ಯಾಮ್ಬುಜಲೋಚನಸ್ಯ ದಿವಿಷತ್ಸೇವ್ಯಃ ಕಿರೀಟೋಜ್ಜ್ವಲಃ |**
**ವಾಯ್ವಾಕಾಶಧರಾರ್ಣವಾಗ್ನಿರವಿಚನ್ದ್ರಾದ್ಯಾಶ್ಚ ದೇವಾಶ್ಚ್ಯಯಂ**
**ಭೌಮಾ ಮಾನುಷತಿರ್ಯಗಾದಿ ಜಡವಸ್ತ್ವಾದ್ಯಂ ಚ ಸರ್ವಂ ಭವೇತ್ ||**

ತಾ||(ಅವನ ಅವತಾರವು ಸಕಲ ವಿಭೂತಿಯೊಡನೆ ಕೂಡಿಯೇ ಇರುವುದೆಂದು ಹೇಳುತ್ತಾರೆ.) ಶ್ಯಾಮಳಮೂರ್ತಿಯಾಗಿಯೂ, ಪದ್ಮಾಕ್ಷನಾಗಿಯೂ, ನಿತ್ಯಸೂರೀಶ್ವರನಾಗಿಯೂ, ರಮ್ಯಾಲಕಾವಳೀಧರನಾಗಿಯೂ, ಉಜ್ಜ್ವಲಕಿರೀಟಧಾರಿಯಾಗಿಯೂ ಇರುವ ಸರ್ವೇಶ್ವರನ ಆವಿರ್ಭಾವವು (ಅವತಾರವು) ಪೃಥಿವ್ಯಪ್ತೇಜೋವಾಯ್ವಾಕಾಶಗಳೊಡನೆಯೂ, ಚನ್ದ್ರಾದಿತ್ಯಾದಿದೇವತಾವರ್ಗಗಳೊಡನೆಯೂ, ಮಾನುಷತಿರ್ಯಕ್‌ಸ್ಥಾವರಾದಿ ಸಕಲಪದಾರ್ಥವರ್ಗಗಳೊಡನೆಯೂ ಕೂಡಿಯೇ ಇರುವುದು. (ಅವನೇ ಪ್ರಪಂಚಾತ್ಮಕನಾಗಿ ತೋರುವನು.)

(೬) ತೋಱ್ಱಕ್ಕೇಡವೈಯಿಲ್ಲವನುಡೈಯಾನವನೊರು
ಮೂರ್ತ್ತಿಯಾಯ್,
ಶೀಱ್ಱತ್ತೋಡರುಳ್ ಪೆಱ್ಱವನಡಿಕ್ಕೀೞ್ಪ್ಪುಕ ನಿನ್ಱ
ಶೆಙ್ಕಣ್ಮಾಲ್,
ನಾಱ್ಱತ್ತೋಱ್ಱ ಚ್ಚುವೈ ಯೊಲಿ ಯುಱಾಕ್ಕಿನ್ಱ,
ಎಮ್ ವಾನವ
ರೇಱ್ಱೈಯೇಯನ್ಱಿ ಮಱ್ಱೊರುವರೈ ಯಾನಿಲೇನೆೞು
ಮೈಕ್ಕುಮೇ.

ಪ್ರ॥ ತೋಱ್ಱಮ್ ಕೇಡು – ಜನನಮರಣಗಳೆಂಬ, ಅವೈ ಇಲ್ಲವ‌ನ್ – ಅವು ಇಲ್ಲದವನೂ, ಉದ್ದೈಯಾನ್ – (ಅವತಾರಗಳಲ್ಲಿ) ಅವುಗಳುಳ್ಳವನೂ, ಅವನ್–ಆ ಪ್ರಮಾಣಪ್ರಸಿದ್ಧನಾದವನೂ, ಒರುಮೂರ್ತಿಯಾಯ್–ಅದ್ವಿತೀಯವಾದ ಒಂದು (ನರಸಿಂಹ) ಮೂರ್ತಿಯಾಗಿ, ಶೀಱ್ಱತ್ತೋೞುಡು–(ಹಿರಣ್ಯಕಶಿಪುವಿನ ವಿಷಯದಲ್ಲಿ) ರೋಷದೊಡನೆ, ಅರುಳ್‌ಪೆಱ್ಱವನ್–ಕೃಪೆಯನ್ನು ಪಡೆದ (ಕೃಪೆಗೆ ಪಾತ್ರನಾದ) ಪ್ರಹ್ಲಾದನು, ಅಡಿಕ್ಕೀೞ್–ತನ್ನ ಪಾದಾರವಿನ್ದಗಳ ಕೆಳಗೆ, ಪುಕ–ಪ್ರವೇಶಿಸಿ ಆಶ್ರಯಿಸುವಂತೆ, ನಿನ್ಱ–ಸುಲಭನಾಗಿ ನಿಂತ, ಶೆಙ್ಗಣ್ಮಾಲ್–ರಕ್ತಲೋಚನನಾದ ಭಕ್ತವತ್ಸಲನೂ, ನಾಱ್ಱಮ್–ಗನ್ಧವೂ, ತೋಱ್ಱಮ್–ರೂಪವೂ, ಶುವೈ–ರಸವೂ, ಒಲಿ–ಶಬ್ದವೂ, ಊಱಲ್–ಸ್ಪರ್ಶವೂ, ಆಕಿ ನಿನ್ಱ–ಇವುಗಳಾಗಿ ನಿಂತ (ಈ ಗುಣಗಳುಳ್ಳ ವಸ್ತುಗಳಿಗೆ ನಿಯಾಮಕನಾಗಿ ನಿಂತ), ಎಮ್ ವಾನವರ್ ಏಱ್ಱೈಯೇ ಅನ್ಱಿ –ನಮ್ಮ ನಿತ್ಯಸೂರೀಶ್ವರನನ್ನೇ ಹೊರತು, ಯಾನ್–ನಾನು, ಎಱ್ಱೈಕ್ಕುಮ್ –ಸರ್ವಕಾಲದಲ್ಲೂ, ಮಱ್ಱಾರುವರೈ–ಮಿಕ್ಕ ಒಬ್ಬರನ್ನೂ (ಯಾವ ದೇವತಾನ್ತರವನ್ನೂ), ಇಲೇನ್–ಆಶ್ರಯವಾಗಿ ಹೊಂದಿದವನಲ್ಲ.

( ಸ–ಗಾ–ರ ॥ )

**ಆವಿರ್ಭೂಯ ಚ ಜನ್ಮನಾಶರಹಿತೋ ಭಾತ್ಯದ್ವಿತೀಯೋ ಹರಿ–**
**ಮೂರ್ತಿಶ್ಶ್ರೀನೃಹರಿಃ ಕ್ರುಧಾಕುಲಮತಿರ್ಭಕ್ತಾಶ್ರಿತಾಂಘ್ರಿದ್ವಯಃ ।**
**ವಾತ್ಸಲ್ಯಾದನುರಕ್ತಲೋಚನಮಿಮಂ ಸೂರೀನ್ದ್ರಸೇವ್ಯಂ ಭಜೇ ।**
**ನಾನ್ಯಂ ಜಾತು ಹಿ ಗನ್ಧರೂಪರಸವಾಕ್‌ಸ್ಪರ್ಶಾತ್ಮಕಂ ತಂ ವಿನಾ ॥**

ತಾ॥ ( ಆಶ್ರಿತವಾತ್ಸಲ್ಯಾತಿಶಯವುಳ್ಳ ನರಸಿಂಹಮೂರ್ತಿಯನ್ನು ಬಿಟ್ಟು ಬೇರೊಬ್ಬರನ್ನು ನಾನು ಆಶ್ರಯಿಸಿ ಇಲ್ಲವೆಂದು ಹೇಳುತ್ತಾರೆ). ಜನನಮರಣಾದಿ ರಹಿತನಾಗಿಯೂ, ಅವತಾರಗಳಲ್ಲಿ ತತ್ಸಹಿತನಾಗಿಯೂ, ಸಕಲಪ್ರಮಾಣಸಿದ್ಧನಾಗಿಯೂ ಇರುವ ಅದ್ವಿತೀಯನಾದ ನರಸಿಂಹಮೂರ್ತಿಯು ಭಕ್ತವತ್ಸಲನಾಗಿಯೂ, ಪುಂಡರೀಕಾಕ್ಷನಾಗಿಯೂ, ಶಬ್ದ ಸ್ಪರ್ಶ ರೂಪ ರಸ ಗಂಧಗಳುಳ್ಳ ಪಂಚಭೂತಗಳಿಗೂ ನಿಯಾಮಕನಾಗಿ ನಿಂತು ನಿತ್ಯಸೂರೀಶ್ವರನಾಗಿಯೂ ಇರುವುದರಿಂದ ಇವನನ್ನು ಹೊರತು ಬೇರೆ ಯಾರನ್ನೂ ಯಾವಕಾಲದಲ್ಲೂ ನಾನು ಆಶ್ರಯಿಸಿ ಇಲ್ಲ' (ಇವನೇ ನನಗೆ ಸರ್ವಕಾಲದಲ್ಲೂ ರಕ್ಷಕನೆಂದು ಭಾವವು).

(೭) ಎೞುಮೈಕ್ಕುಮೆನದಾವಿಕ್ಕಿನ್ನಮುದತ್ತಿನೈ ಯೆನದಾರುಯಿರೈ,
ಕೆೞುಮಿಯ ಕದಿರ್ಚ್ಚೋದಿಯೈ ಮಣಿವಣ್ಣನೈ
ಕ್ಕುಡಕ್ಕೂತ್ತನೈ,
ವಿೞುಮಿಯವಮರರ್ ಮುನಿವರ್ ವಿೞುಙ್ಗುಮ್ ಕನ್ನಲ್
ಕನಿಯಿನೈ,
ತೊೞುಮಿನ್ ತೂಯಮನತ್ತರಾಯಿಱೈಯುಮ್ ನಿಲ್ಲಾ
ತುಯರಙ್ಗಳೇ.

ಪ್ರ॥ ಎೞುಮೈಕ್ಕುಮ್-ಎಲ್ಲಾ ಅವಸ್ಥೆಗಳಲ್ಲೂ, ಎನದು ಆವಿಕ್ಕು - ನನ್ನ ಆತ್ಮವಸ್ತುವಿಗೆ, ಇಃ ಅಮುದತ್ತಿನೈ - ನಿರತಿಶಯಭೋಗ್ಯಭೂತನಾದವನನ್ನು, ಎನದು ಉಯಿರ್ ಆರ್ - ನನ್ನ ಸ್ವರೂಪದೊಡನೆ ಸೇರಿದ, ಕೆೞುಮಿಯ ಕದಿರ್ ಕೋದಿಯೈ-ನಿಬಿಡವಾದ ಪ್ರಕಾಶವುಳ್ಳ ತೇಜೋಮೂರ್ತಿಯನ್ನು, ಮಣಿವಣ್ಣನೈ-ಮಾಣಿಕ್ಯವರ್ಣನನ್ನು, ಕುಡಕ್ಕೂತ್ತನೈ-ಕುಂಭಲೀಲಾಪರನನ್ನು, ವಿೞುಮಿಯ-ಪೂಜ್ಯರಾದ, ಅಮರರ್-ನಿತ್ಯಸೂರಿಗಳೂ, ಮುನಿವರ್-ಋಷಿಗಳೂ, ವಿೞುಙ್ಗುಮ್-ನುಂಗುವ, ಕನ್ನಲ್ ಕನಿಯಿನೈ - ಸಕ್ಕರೆಯೊಂದಿಗೆ ಸೇರಿದ (ಮಧುರವಾದ) ಹಣ್ಣನ್ನು, ತೂಯಮನತ್ತಾಯ್ - ಪರಿಶುದ್ಧಚಿತ್ತರಾಗಿ (ಅನನ್ಯ ಪರರಾಗಿ), ತೊೞುಮಿನ್-ಆಶ್ರಯಿಸಿರಿ. ತುಯರಙ್ಗಳ್-ಪಾಪಗಳು, ಇಱೈಯುಮ್-ಸ್ವಲ್ಪವೂ, ನಿಲ್ಲಾ-ನಿಮ್ಮಲ್ಲಿ ನಿಲ್ಲಲಾರವು.

( ಸ-ಗಾ-ರ ॥ )—

**ಮಾಧುರ್ಯಾಮೃತಮಾತ್ಮನೋ ಮಮ ಸದಾ ಭಾಸ್ವಾನ್ ಮಯಾ ಸಙ್ಗತೋ**
**ಜ್ಯೋತಿಶ್ಶ್ರೀಮಣಿವರ್ಣ ಏಷ ಸತತಂ ಕುಮ್ಭಾದಿಲೀಲಾಪರಃ ।**
**ಭೋಜ್ಯಂ ಸೂರಿವರೈಶ್ಚ ಮೌನಿನಿವಹೈರ್ದಿವ್ಯಂ ಫಲಂ ಶ್ರೀಧರಂ**
**ಯೂಯಂ ಸಂಶ್ರಯತಾದ್ಯ ಶುದ್ಧಮನಸಸ್ಸರ್ವಾಘಶಾನ್ತಿರ್ಭವೇತ್ ॥**

ತಾ॥ (ಹೀಗೆ ನಿರತಿಶಯಭೋಗ್ಯನಾದವನು ಅತ್ಯನ್ತ ಸುಲಭನಾದುದರಿಂದ ಇವನನ್ನೇ ಆಶ್ರಯಿಸಿರಿ - ಎಂದು ಹೇಳುತ್ತಾರೆ.) ಸರ್ವಾವಸ್ಥೆಗಳಲ್ಲೂ ನನಗೆ ನಿರತಿಶಯಭೋಗ್ಯನಾಗಿಯೂ, ನನ್ನ ಸ್ವರೂಪದೊಡನೆ ಸೇರಿದ ದಿವ್ಯ ತೇಜೋ ಮೂರ್ತಿಯಾಗಿಯೂ, ಮಾಣಿಕ್ಯವರ್ಣನಾಗಿಯೂ, ಕುಂಭಲೀಲಾಪರನಾಗಿಯೂ, ನಿತ್ಯಸೂರಿಮುನಿವರ್ಯಾದಿಗಳಿಗೆ ಮಧುರಫಲದಂತೆ ಭೋಗ್ಯತಮನಾಗಿಯೂ ಇರುವ

ಭಗವಂತನನ್ನು ಅನನ್ಯಪರರಾಗಿ ನೀವು ಆಶ್ರಯಿಸಿರಿ – ನಿಮ್ಮ ಪಾಪಗಳೆಲ್ಲಾ ನಿಶ್ಶೇಷವಾಗಿ ಹೋಗುವುವು – ಎಂದು ಬೋಧಿಸುತ್ತಾರೆ.

(೮) ತುಯರಮೇ ತರು ತುನ್ಬವಿನ್ಬವಿನೈಕಳಾಯವೈಯಲ್ಲನಾಯ್,
ಉಯರ ನಿನ್ಱದೋರ್ ಶೋದಿಯಾಯುಲಕೇೞು
ಮುಣ್ಡುಮಿೞ್ನ್ದಾನ್ ತನ್ನೈ
ಅಯರ ವಾಙ್ಗುನಮನ್ ತಮರ್ಕ್ಕರುನಞ್ಜಿನೈ
ಯಚ್ಚುತನ್ ತನ್ನೈ,
ತಯರದಱ್ಕು ಮಕನ್ ತನ್ನೈ ಯನ್ಱಿ ಮಱ್ಱಿಲೇನ್
ತಞ್ಜಮಾಕವೇ.

ಪ್ರ॥ ತುಯರಮೇ ತರು – ಸಂತಾಪವನ್ನೇ ಉಂಟುಮಾಡುವ, ತುನ್ಬ ಇನ್ಬ ವಿನೈಕಳಾಯ್–ದುಃಖಕ್ಕೂ ಸುಖಕ್ಕೂ ಕಾರಣವಾದ ಪಾಪಪುಣ್ಯರೂಪಕರ್ಮಗಳಿಗೆ ಅಧಿಪತಿಯಾಗಿಯೂ, ಅವೈಯಲ್ಲನಾಯ್ – ಅವುಗಳಿಗೆ ವಶ್ಯನಲ್ಲದವನಾಗಿಯೂ, ಉಯರ – ಅತ್ಯುನ್ನತವಾಗ ಪರಮಪದದಲ್ಲಿ, ನಿನ್ಱದು – ನಿತ್ಯವಾಗಿ ನಿಂತಿರುವ, ಓರ್ ಶೋದಿಯಾಯ್ – ಅದ್ವಿತೀಯವಾದ ದಿವ್ಯತೇಜೋಮೂರ್ತಿಯಾಗಿಯೂ ಇರುವ, ಉಲಕೇೞುಮ್–ಏಳು (ಸಕಲ) ಲೋಕಗಳನ್ನೂ, ಉಣ್ಡು ಉಮಿೞ್ನ್ದಾನ್ ತನ್ನೈ–ಭಕ್ಷಿಸಿ ಉಗಿದು ರಕ್ಷಿಸುವವನನ್ನು, ಅಯರ–ಬುದ್ಧಿಮೋಹವುಂಟಾಗುವಂತೆ, ವಾಙ್ಗುಮ್ – ಪ್ರಾಣಾಪಹಾರಮಾಡುವ, ನಮನ್ ತಮರ್ಕ್ಕು – ಯಮಭಟರಿಗೆ, ಅರುನಞ್ಜಿನೈ–ದುರ್ನಿವಾರವಾದ ವಿಷರೂಪನನ್ನು, ಅಚ್ಚುದನ್ ತನ್ನೈ–ಆಶ್ರಿತರನ್ನು ಕೈಬಿಡದೆ ರಕ್ಷಿಸುವವನನ್ನು, ತಯರದರ್ ಕುಮರನ್ ತನ್ನೈ–ದಶರಥ ಪುತ್ರನಾದ ರಾಮನನ್ನು, ಅನ್ಱಿ–ಹೊರತು, ಮಱ್ಱು – ಮತ್ತು ಯಾರನ್ನೂ, ತಞ್ಜಮಾಕ ಇಲೇನ್–ರಕ್ಷಕರೆಂದು ನಾನು ಹೊಂದಿಲ್ಲ.

( ಸ–ಗಾ–ರ ॥ )—

ಸರ್ವೇಷಾಂ ಸುಖದುಃಖಕಾರಣ ಮಹಾಕರ್ಮಾವಳೇಶಾಸಿತಾ
ತತ್ಸಂಸ್ಪರ್ಶವಿವರ್ಜಿತಶ್ಚ ಪರಮೋ ಜ್ಯೋತಿಃ ಪರಂ ಶಾಶ್ವತಮ್ ।
ಭುಙ್ಕ್ತೇ ಚೋದ್ಗಿರತಿ ಸ್ವಯಂ ಯಮಭಟಧ್ವಂಸೀ ಚ ಲೋಕಾನ್ ಹರಿ–
ಸ್ತ್ವೇಶಂ ದಾಶರಥಿಂ ವಿನಾಽಚ್ಯುತಮಿಮಂ ನಾನ್ಯಂ ಶರಣ್ಯಂ ಭಜೇ ॥

ತಾ|| (ಆಶ್ರಿತರಕ್ಷಕನಾದ ದಶರಥಪುತ್ರನಾದ ಶ್ರೀರಾಮನನ್ನು ಹೊರತು ಅನ್ಯರನ್ನು ನಾನು ಆಶ್ರಯಿಸಿ ಇಲ್ಲವೆಂದು ಹೇಳುತ್ತಾರೆ.) ಸಂಸಾರ ಸನ್ತಾಪ ಜನಕವಾದ ಪುಣ್ಯಪಾಪ ಕರ್ಮಗಳಿಗೆ ಅಧಿಪತಿಯಾಗಿಯೂ, ಅವುಗಳಿಗೆ ಅನಧೀನ ನಾಗಿಯೂ, ಪರಮಪದನಾಥನಾದ ದಿವ್ಯತೇಜೋನಿಧಿಯಾಗಿಯೂ, ಸಕಲ ಸೃಷ್ಟಿ ಸ್ಥಿತಿಲಯ ಕರ್ತನಾಗಿಯೂ, ಯಮಭಟಧ್ವಂಸಿಯಾಗಿಯೂ, ಆಶ್ರಿತವತ್ಸಲನಾಗಿ ಯೂ ಇರುವ ದಶರಥ ಪುತ್ರನಾದ ಶ್ರೀರಾಮನನ್ನು ಹೊರತು ಅನ್ಯರನ್ನು ನಾನು ಶರಣವನ್ನಾಗಿ ಹೊಂದಿಲ್ಲವೆಂದು ತಮ್ಮ ಸಿದ್ಧಾನ್ತವನ್ನು ಹೇಳುತ್ತಾರೆ.

(೯) ತಞ್ಜಮಾಕಿಯ ತನ್ದೈತಾಯೊಡು ತಾನುಮಾಯವೈ
ಯಲ್ಲನಾಯ್,
ಎಞ್ಜಲಿಲಮರರ್ ಕುಲಮುದಲ್ ಮೂವರ್ ತಮ್ಮುಳ್ಳು
ಮಾದಿಯೈ,
ಅಞ್ಜಿ ನೀರುಲಕತ್ತುಳ್ಳೀರ್ಕಳವನಿವನೆನ್ರು ಕೂಶೇನ್ಮಿನ್,
ನೆಞ್ಜಿನಾಲ್ ನಿನೈಪ್ಪಾನ್ ಯವನವನಾಕುಮ್ ನೀಳ್ಕಡಲ್
ವಣ್ಣನೇ.

ಪ್ರ|| ತಞ್ಜಮಾಕಿಯ-ಧಾರಕರಾದ (ರಕ್ಷಕರಾದ), ತನ್ದೈತಾಯೊಡು-ತಂದೆ ತಾಯಿಗಳೊಡನೆ, ತಾನುಮಾಯ್- ತಾನೂ ರಕ್ಷಕನಾಗಿ ನಿಂತು, ಅವೈಯಲ್ಲನಾಯ್ -ಅಷ್ಟು ಮಾತ್ರವಲ್ಲದೆ ಸರ್ವವಿಧ ಬನ್ಧುವಾಗಿಯೂ, ಎಞ್ಜಲ್ ಇಲ್-ಅನುಭವ ಸಂಕೋಚವಿಲ್ಲದ, ಅಮರರ್ ಕುಲಮ್ ಮುದಲ್-ನಿತ್ಯಸೂರಿ ಸನ್ತತಿಗೆ ಕಾರಣ ಭೂತನಾಗಿಯೂ, ಇರುವ ಮೂವರ್ ತಮ್ಮುಳ್ಳುಮ್-ಬ್ರಹ್ಮಾದಿ ಮೂರ್ತಿತ್ರಯು ದಲ್ಲಿಯೂ, ಆದಿಯೈ-ಪ್ರಧಾನನಾದವನನ್ನು ಕುರಿತು, ಉಲಕತ್ತು ಉಳ್ಳೀರ್ಕಳ್- ಈ ಲೋಕವಾಸಿಗಳಾದ, ನೀರ್-ನೀವು, ಅಞ್ಜಿ-(ಅವನ ಪರತ್ವವನ್ನು ನೋಡಿ) ಅಂಜಿ, ಅವ‌ನ್-(ಅಪರಿಚ್ಛಿನ್ನಮಹಿಮನಾದ) ಅವನು, ಇವನ್ - (ನಮಗೆ ಸುಲಭ ನಾದ) ಇವನು, ಎನ್ರು-ಎಂಬ ಉತ್ಕರ್ಷಾಪಕರ್ಷ ಬುದ್ಧಿಯಿಂದ, ಕೂಶೇನ್ಮಿನ್- ಸಂಶಯಪಡಬೇಡಿರಿ. ನೆಞ್ಜಿನಾಲ್-ಮನಸ್ಸಿನಿಂದ, ನಿನೈಪ್ಪಾನ್-ಚಿನ್ತಿಸಲ್ಪಡು ವವನು, ಯವನ್-ಯಾವನೋ (ಯಾವ ವಿಗ್ರಹರೂಪಿಯೋ), ಅವನ್ - ಅವನು (ಆ ಅರ್ಚಾವತಾರ ಮೂರ್ತಿಯೇ), ಕಡಲ್ - ಸಮುದ್ರದಂತೆ, ನೀಳ್‌ವಣ್ಣನ್- ಅಪರಿಚ್ಛಿನ್ನ ಸ್ವಭಾವನಾದ ಸರ್ವೇಶ್ವರನೇ, ಆಕುಮ್-ಆಗಿರುವನು.

( ಸ-ಗಾ-೦ ॥ )—

**ಮಾತಾ ಚಾಪಿ ಪಿತಾ ಸ್ವಯಂ ಹಿತಪರಸ್ತ್ವನ್ಯೋಽಪಿ ಬನ್ಧುಸ್ತ್ವಕ-**
**ಸ್ಸೂರೀಣಾಮಪಿ ಚಾಗ್ರಣೀಸ್ತ್ರಿವಿಧಮೂರ್ತ್ಯಾದಿಷ್ಟಯಶ್ಶ್ರೀಧರಃ ।**
**ತಂ ತಾದೃಕ್ ಸ್ವಯಮೀದೃಗಿತ್ಯಪಿ ಭಿಯಾ ಮಾ ಸಂಶಯಂ ಮಾನವಾ**
**ಲೋಕೇಽಸ್ಮಿನ್ ಕುರುತ! ಸ್ಮೃತಸ್ತು ಭಗವಾನ್ ಗಭೀರ ರೂಪೋಽಬ್ಧಿವತ್॥**

ತಾ॥ (ಪರತ್ವನೇ ಮೊದಲಾಗಿ ಅವತಾರಗಳನ್ನೆಲ್ಲಾ ವರ್ಣಿಸಿದರೂ ಅವುಗಳು ಈಗ ನಮಗೆ ಆಶ್ರಯಣೀಯವಾಗಲಾರವೆಂದು ಸಂಶಯಪಡುವವರನ್ನು ಕುರಿತು ಅರ್ಚಾವತಾರವು ಸರ್ವಸುಲಭವಾಗಿ ಈಗಲೂ ನಿಮಗೆ ಸಮಾಶ್ರಯಣೀಯವೆಂದು ಬೋಧಿಸುತ್ತಾರೆ. ಈ ದಶಕದ ಮುಖ್ಯತಾತ್ಪರ್ಯವು ಈ ಪದ್ಯದಿಂದ ಸೂಚಿತವಾಗಿದೆ.) ಮಾತಾಪಿತೃಗಳಂತೆ ರಕ್ಷಕನಾಗಿಯೂ, ತಾನೇ ಸರ್ವವಿಧ ಬನ್ಧುವಾಗಿಯೂ, ನಿತ್ಯಸೂರಿಸನ್ತತಿಗೂ ಕಾರಣಭೂತನಾಗಿಯೂ, ಬ್ರಹ್ಮಾದಿ ಮೂರ್ತಿತ್ರಯದಲ್ಲಿಯೂ ಪ್ರಧಾನನಾಗಿ ಇರುವ ಸರ್ವೇಶ್ವರನನ್ನು ಕುರಿತು ಯಾವ ಸಂಶಯವನ್ನೂ ಮಾಡದೆ ನೀವು ಇಷ್ಟಪಡುವ (ವಿಗ್ರಹ) ರೂಪದಿಂದಲೇ ಅವನು ಸೇವ್ಯನೆಂದು (ಅರ್ಚಾವತಾರವನ್ನೇ) ಗಂಭೀರ ಸ್ವಭಾವನೆಂದು ನಂಬಿ ಭಜಿಸಿರಿ

(೧೦) ಕಡಲ್‌ವಣ್ಣನ್ ಕಣ್ಣನ್ ವಿಣ್ಣವರ್ ಕರುಮಾಣಿಕ್ಕ
ಮೆನದಾರುಯಿರ್,
ಪಡವರವಿನಣೈಕ್ಕಿಡನ್ದ ಪರಂಶುಡರ್ ಪಣ್ಡು
ನೂಱ್ಱುವರ್,
ಅಡವರುಮ್ ಪಡೈತಬ್ಗ ಪೈವರ್‌ಕಳ್ಕಾಕಿ ವೆಞ್ಞಮೆತ್ತು!
ಅನ್ಱು ತೇರ್,
ಕಡವಿಯ ಪೆರುಮಾನ್ ಕನೈಕ್ಕಱಲ್ ಕಾಣ್ಬದೆನ್ಱುಕೊಲ್
ಕಣ್‌ಕಳೇ.

ಪ್ರ॥ ವಿಣ್ಣವರ್-ಪರಮಪದವಾಸಿಗಳಿಗೆ, ಕರುಮಾಣಿಕ್ಕಮ್ – ನೀಲರತ್ನದಂತೆ ಪ್ರಕಾಶಮಾನನಾಗಿಯೂ ಭೋಗ್ಯನಾಗಿಯೂ ಇರುವ, ಪಡ ಅರವಿ-ವಿಕಸಿತ ಫಣಗಳುಳ್ಳ ಆದಿಶೇಷನೆಂಬ, ಅಣೈಕ್ಕಿಡನ್ದ – ಹಾಸಿಗೆಯಲ್ಲಿ ಮಲಗಿರುವ, ಪರಂ

ಶುಡರ್ – ದಿವ್ಯತೇಜೋನಿಧಿಯಾದ, ಕಡಲ್‌ವಣ್ಣ್ – ಸಮುದ್ರದಂತೆ ಗಂಭೀರ ಸ್ವಭಾವನೂ ಶ್ರಮಹರವಾದ ಶರೀರವುಳ್ಳವನೂ ಆದ, ಕಣ್ಣ್-ಶ್ರೀಕೃಷ್ಣನೂ, ಆದ, ಎನದು ಆರ್ ಉಯಿರ್ – ನನಗೆ ಪೂರ್ಣಧಾರಕನಾಗಿ, ಪಣ್ಡು–ಪೂರ್ವ ಕಾಲದಲ್ಲಿ, ನೂಱ್ಱುವರ್–ನೂರುಮಂದಿ ಕೌರವರ ಪಕ್ಷಕ್ಕೆ ಸೇರಿದ, ಅಡವರುಮ್ –ಹಿಂಸಿಸುವುದಕ್ಕೆ ಬರುವ, ಪಡೈ–ಸೈನ್ಯವೆಲ್ಲಾ, ಮಙ್ಗ – ನಶಿಸುವಂತೆ, ಐವರ್ ಕಳ್ಕು–ಐದುಮಂದಿ ಪಾಂಡವರಿಗೆ, ಆಕಿ-ಸರ್ವನಿರ್ಭರಕ್ಷಕನಾಗಿ, ವೆಮ್ ಶಮತ್ತು–ಕ್ರೂರವಾದ ಯುದ್ಧದಲ್ಲಿ, ಅನ್ರು- ಆಗ, ತೇರ್‌ಕಡವಿಯ–ರಥವನ್ನು (ಸಾರಥಿಯಾಗಿ) ನಡೆಸಿದ, ಪೆರುಮಾ–ಸ್ವಾಮಿಯ, ಕನ್ಶೈಕ್ಕೋಲ್–ವೀರಗೊಲುಸು ಧರಿಸಿರುವ ಪಾದ ಗಳನ್ನು, ಕಣ್‌ಕಳ್–(ನನ್ನ) ಕಣ್ಣುಗಳು, ಕಾಣ್ಬದ–ಕಾಣುವುದು, ಎನ್ರುಕೊಲೋ —ಎಂದಿಗೋ ?

( ಸ–ಗಾ–ರ || )—

**ಸೂರೀಣಾಂ ಮಣಿರತ್ನಮುತ್ತಮಗುಣಂ ಶ್ರೀಶೇಷಶಾಯಿಪರಂ**
**ಜ್ಯೋತಿಶ್ಚಾಪಿ ಗುಣಾಮ್ಬುಧಿರ್ಮಮ ಹರಿಃ ಕೃಷ್ಣೋಽಸ್ತಿ ನ್ಯೈ ಧಾರಕಃ|**
**ಪೂರ್ವಂ ಯಶ್ಶತವೀರಸೈನ್ಯಮಖಿಲಂ ಹನ್ತುಂ ಸ್ವಯಂ ರಕ್ಷಿತುಂ**
**ಪಞ್ಚಾಜೌ ನಿರತೋಽಸ್ಯ ಸಾರಥಿವಿಭೋಃ ಪಶ್ಯಾಮಿ ಪಾದೌ ಕದಾ ?**

ತಾ|| (ಅನನ್ತರ–ತಮಗೆ ಅತ್ಯನ್ತ ಪ್ರೇಮಪಾತ್ರವಾದ ಕೃಷ್ಣಾವತಾರವನ್ನೇ ಪುನಃ ಸ್ಮರಿಸಿ ಆ ಪಾರ್ಥಸಾರಥಿಯ ಪಾದಗಳನ್ನು ಎಂದಿಗೆ ಕಾಣುವೆನೋ–ಎಂದು ಹೇಳುತ್ತಾರೆ.) ಪರಮಪದವಾಸಿಗಳಿಗೆ ಅತ್ಯನ್ತ ಭೋಗ್ಯನಾದ ಮಾಣಿಕ್ಯವರ್ಣ ನಾಗಿಯೂ, ಶೇಷಶಾಯಿಯಾಗಿಯೂ, ಸಮುದ್ರದಂತೆ ಗಂಭೀರಸ್ವಭಾವನಾಗಿಯೂ ಶ್ರಮಹರನಾಗಿಯೂ, ಶ್ರೀಕೃಷ್ಣರೂಪಿಯಾಗಿ ನನಗೆ ಅನ್ತರಂಗ ಪ್ರಿಯನಾಗಿ ಧಾರಕತಮನಾಗಿಯೂ, ಕೌರವ ಸೈನ್ಯವನ್ನೆಲ್ಲಾ ನಾಶಪಡಿಸಿ ಪಾಂಡವರನ್ನು ರಕ್ಷಿಸುವಂತೆ ಆ ಮಹಾಯುದ್ಧದಲ್ಲಿ ಸಾರಥ್ಯವನ್ನು ಮಾಡಿದ ನನ್ನ ಸ್ವಾಮಿಯಾಗಿ ಯೂ ಇರುವ ಸರ್ವೇಶ್ವರನ ಪಾದಗಳನ್ನು ನನ್ನ ಕಣ್ಣುಗಳಿಂದ ಯಾವಾಗ ನೋಡುವೆನೋ—ಎಂದು ಆಶಾಪರಾಶರಾಗುತ್ತಾರೆ.

(೧೧) ಕಣ್ಕಳ್ ಕಾಣ್ಡಱ್ಕರಿಯನಾಯ್ ಕ್ಕರುತ್ತುಕ್ಕು ನನ್ಱು
ಮೆಳಿಯನಾಯ್,
ಮಣ್ಕೊಳ್ ಞಾಲತ್ತುಯಿರ್ಕ್ಕೆಲ್ಲಾಮರುಳ್ಶೆಯ್ಯುಮ್
ವಾನವರೀಶನೈ,
ಪಣ್ಕೊಳ್ ಶೋಲೈವ್ವಳುದಿನಾಡನ್ ಕುರುಕೈಕ್ಕೋನ್
ಶಡಕೋಪನ್ ಶೊಲ್,
ಪಣ್ಕೊಳ್ಆಯಿರತ್ತಿಪ್ಪತ್ತಾಲ್, ಪತ್ತರಾಕ ಕ್ಕೂಡುಮ್
ಪಯಿಲುಮಿನೇ.

ಪ್ರ॥ ಕಣ್ ಕಳ್–ಕಣ್ಣುಗಳು, ಕಾಣ್ಡಱ್ಕು–ಕಾಣುವುದಕ್ಕೆ (ಸಾಕ್ಷಾತ್ಕರಿಸುವುದಕ್ಕೆ), ಅರಿಯನಾಯ್ – ಅಶಕ್ಯನಾಗಿಯೂ, ಕರುತ್ತುಕ್ಕು – ಮನಸ್ಸಿಗೆ, ನನ್ಱುಮ್ ಎಳಿಯನಾಯ್ – ವಿಶದವಾಗಿ ಅನುಭವಿಸುವುದಕ್ಕೆ ಸುಲಭನಾಗಿಯೂ, ಮಣ್ ಕೊಳ್ – ಪೃಥಿವ್ಯಾದಿರೂಪವಾದ, ಞಾಲತ್ತು – ಪ್ರಪಂಚದಲ್ಲಿ, ಉಯಿರ್ಕ್ಕೆಲ್ಲಾಮ್–ಪ್ರಾಣಿಗಳಿಗೆಲ್ಲಾ, ಅರುಳ್ ಶೆಯ್ಯುಮ್ – ಕೃಪೆಮಾಡುವ (ಅರ್ಚಾರೂಪಿಯಾದ), ವಾನವರೀಶನೈ–ನಿತ್ಯಸೂರೀಶ್ವರನನ್ನು, ಪಣ್ ಕೊಳ್ – (ಭ್ರಮರಧ್ವನಿಗಳಿಂದ) ಗಾನಸ್ವರವುಳ್ಳ, ಶೋಲೈ–ವೃಕ್ಷಗಳಿಂದ ಕೂಡಿದ, ವ್ವಳುದಿನಾಡನ್–ತಿರುವ್ವಳುದಿನಾಡಿಗೆ ನಿರ್ವಾಹಕರಾದ, ಕುರುಕೈಕ್ಕೋನ್ – ಕುರುಕಾಪುರೀಶ್ವರರಾದ, ಶಡಕೋಪನ್ – ನಮ್ಮಾಳ್ವಾರ್, ಶೊಲ್ – ಸ್ತೋತ್ರಮಾಡಲು ರಚಿಸಿದ, ಪಣ್ ಕೊಳ್–ಗಾನರೂಪವಾದ, ಆಯಿರತ್ತು – ಸಹಸ್ರಪದ್ಯಮಾಲೆಯೊಳು, ಇಪ್ಪತ್ತಾಲ್ – ಈ ದಶಕದಿಂದ, ಪತ್ತರ್–ಪರಮೋತ್ಕೃಷ್ಟರಾದ ಭಕ್ತರಾಗಿ, ಆಕಕ್ಕೂಡುಮ್–ಆಗಬಹುದು. (ಆದುದರಿಂದ) ಪಯಿಲುಮಿನ್–ಈ ದಶಕವನ್ನು ಅಭ್ಯಸಿಸಿ ಅನುಸನ್ಧಾನಮಾಡಿರಿ.

( ಸ– ಗಾ–ರ ॥ )—

**ಅಕ್ಷಿದ್ವನ್ದ್ವಪರೋಕ್ಷಮೇವ ಮನಸಸ್ಸಾಕ್ಷಾತ್ಪದಂ ಶೀಲತಃ**
**ಪೃಥ್ವ್ಯಾಂ ಪ್ರಾಣಿತತೇಃ ಕೃಪಾಜಲನಿಧಿಂ ಸೂರೀನ್ದ್ರನಾಥಂ ಹರಿಮ್ ।**
**ಸ್ತೋತುಂ ಶ್ರೀಕುರುಕೇಶ್ವರಶ್ಶಠರಿಪುಸ್ಸಾಹಸ್ರಮೇವಾಕರೋ–**
**ತ್ತತ್ರೇದಂ ದಶಕಂ ತನೋತಿ ಪರಮಾಂ ಭಕ್ತಿಂ ! ಜನೈಃ ಪಠ್ಯತಾಮ್॥**

ತಾ॥ (ಈ ದಶಕವನ್ನು ಅಭ್ಯಾಸಮಾಡುವವರು ಭಕ್ತೋತ್ತಮರಾಗುವರೆಂದು ಪಠನ ಫಲವನ್ನು ಸೂಚಿಸುತ್ತಾರೆ.) ಕಣ್ಣುಗಳಿಂದ ಸಾಕ್ಷಾತ್ಕರಿಸಲು ದುರ್ಲಭ

ನಾಗಿಯೂ, ಮನಸ್ಸಿನಿಂದ ಚಿನ್ತಿಸುವುದಕ್ಕೆ ಸುಲಭನಾಗಿಯೂ, ಪೃಥಿವ್ಯಾದಿ ಪ್ರಪಂಚದಲ್ಲಿ ಸಕಲಪ್ರಾಣಿಗಳಿಗೂ ಕೃಪೆಮಾಡುವುದಕ್ಕೋಸ್ಕರ ಅರ್ಚಾವತಾರ ರೂಪಿಯಾಗಿಯೂ ಇರುವ ನಿತ್ಯಸೂರೀಶ್ವರನನ್ನು—ತಿರುವಮ್ಮಾದಿನಾಡಿಗೆ ಅಧಿಪತಿ ಯಾದ ಕುರುಕಾಪುರೀಶ್ವರರಾದ ನಮ್ಮಾಳ್ವಾರ್ರು ಸ್ತೋತ್ರಮಾಡಲು ರಚಿಸಿದ ಗಾನರೂಪವಾದ ಸಹಸ್ರಪದ್ಯಮಾಲೆಯೊಳು ಈ ದಶಕವನ್ನು ಪಠನಮಾಡುವವರು ಭಕ್ತೋತ್ತಮರಾಗುವರು. ಆದುದರಿಂದ ಎಲ್ಲರೂ ಈ ದಶಕವನ್ನು ಅಭ್ಯಸಿಸಿರಿ.

( ದ್ರ–ಉ–ಸಂ || )—

**ತಾನ್ನಿನ್ನಿತಾನಪಿ ವಿಹಾತುಮಸಾವಶಕ್ತ–**
**ಶ್ಶೌರೇರ್ದುರಾಸದತಯಾ ವಿಮುಖಾ ವಿಚಾರ್ಯ |**
**ಅರ್ಚಾವತಾರಸುಲಭತ್ವಮುವಾಚ ತೇಷಾ–**
**ಮೇವಂ ಚ ತೇಷು ವಿಮುಖೇಷು ಶುಶೋಚ ಷಷ್ಠೇ ||**

( ದ್ರ–ಉ–ತಾ–ರ || )—

**ಪದ್ಮಾಕ್ಷೀಂ ಪಾಪಹನ್ತ್ರೀಂ ಮಣಿರುಚಿಮಮರಾಧೀಶಚಿನ್ತ್ಯಾಂಘ್ರಿಕಾನ್ತಿಂ**
**ತತ್ತಾದೃಕ್ಕುನ್ತಳಶ್ರೀಸುಘಟಿತಮಕುಟಾಂ ಭಾವುಕಪ್ರಾಪ್ಯಪಾದಾಮ್ |**
**ಶುದ್ಧಾಸ್ವಾದ್ಯಸ್ವಭಾವಾಂ ಯಮಭಟಮಥನೀಂ ಭಕ್ತಧೀವೃತ್ತಿಭವ್ಯಾಂ**
**ನೀಚೋಚ್ಚಾಭೀಷ್ಟವೃತ್ತಿಂ ಹರಿತನುಮವದನ್ನಿರ್ಮಲಾರ್ಚಾನುರಕ್ತಃ ||**

(ಈ ಷಷ್ಠದಶಕದ ಸಾರಾಂಶ–)

ಈ ಆರನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಭಗವನ್ತನ ಸೌಲಭ್ಯ ವನ್ನು ನಿರೂಪಿಸಲು ಉದ್ದೇಶಿಸಿ—ಪರತ್ವವೇ ಮೊದಲಾಗಿ ಕ್ಷೀರಾಬ್ಧಿಶಾಯಿ ಯನ್ನೂ, ಅವತಾರಗಳಲ್ಲಿ ಮಾಯಾಚೇಷ್ಟಿತನಾಗಿ ಸೌಶೀಲ್ಯಾತಿಶಯ, ಆಶ್ರಿತ ವಾತ್ಸಲ್ಯ, ಸರ್ವವಿಧ ಬನ್ಧುತ್ವಾದಿ ಗುಣಗಳೊಡನೆ ಕೂಡಿದ ನರಸಿಂಹಾವತಾರ, ಶ್ರೀರಾಮಾವತಾರ, ಶ್ರೀಕೃಷ್ಣಾವತಾರಾದಿಗಳನ್ನೂ ವರ್ಣಿಸಿ, ತದಪೇಕ್ಷಯಾ ಅರ್ಚಾವತಾರವು ಅತ್ಯನ್ತ ಸುಲಭವಾಗಿ ಸರ್ವಸಮಾಶ್ರಯಣೀಯವಾಗಿದೆ-ಎಂದು ಎಲ್ಲರಿಗೂ ಬೋಧಿಸಿ ಇರುತ್ತಾರೆ.



## ಶ್ರೀಃ

# ತೃತೀಯಶತಕದಲ್ಲಿ—ಸಪ್ತಮದಶಕ.

## (ಪಯಿಲುಂ ಶುಡರೊಳಿ)—

(ಈ ದಶಕದಲ್ಲಿ—ಭಗವತ್ಕೈಂಕರ್ಯ ನಿರತರಾದ ಭಾಗವತರೆಲ್ಲರೂ ಯಾವಜಾತಿ ಕುಲದವರಾದರೂ ನಮಗೆ ಸೇವ್ಯರೆಂದು ಭಾಗವತಶೇಷತ್ವವು ವಿವರಿಸಲ್ಪಡುತ್ತದೆ.)

---

(೧) ಪಯಿಲುಂ ಶುಡರೊಳಿ ಮೂರ್ತ್ತಿಯೈ
ಪ್ಪಙ್ಗಯಕ್ಕಣ್ಣನೈ,
ಪಯಿಲವಿನಿಯ | ನಮ್ ಪಾಱ್ಕಡಲ್‌ಶೇರ್‌ನ್ದ ಪರಮನೈ,
ಪಯಿಲುಮ್ ತಿರುವುಡೈಯಾರ್ ಯವರೇಲುಮವರ್
ಕಣ್ಡೀರ್,
ಪಯಿಲುಮ್ ಪಿಱಪ್ಪಿಡೈ ತೋಱೆಮ್ಮೈಯಾಳುಮ್
ಪರಮರೇ.

ಪ್ರ॥ ಪಯಿಲುಮ್ – ಸೇರಿಕೊಂಡಿರುವ, ಶುಡರ್–(ಸೌನ್ದರ್ಯ ಲಾವಣ್ಯಾದಿ ರೂಪವಾದ) ಕಾನ್ತಿಯುಳ್ಳ, ಒಳಿಮೂರ್ತ್ತಿಯೈ–ತೇಜೋಮಯ ದಿವ್ಯವಿಗ್ರಹವುಳ್ಳ, ಪಙ್ಗಯಕ್ಕಣ್ಣನೈ–ಪುಣ್ಡರೀಕಾಕ್ಷನಾದ, ಪಯಿಲ ಇನಿಯ–ಆಶ್ರಿತರಿಗೆ ನಿರತಿಶಯ ಭೋಗ್ಯನಾದ, ನಮ್‌ಪಾಱ್ಕಡಲ್‌ಶೇರ್‌ನ್ದ ಪರಮನೈ–ನಮ್ಮ ಕ್ಷೀರಾಬ್ಧಿಶಾಯಿಯಾದ ಸರ್ವೇಶ್ವರನನ್ನು, ಪಯಿಲುಮ್ ತಿರು ಉಡೈಯಾರ್ – ಅನುಭವಿಸುವ ಸಂಪತ್ತನ್ನು ಪಡೆದವರು, ಯವರೇಲುಮ್–ಎಷ್ಟು ನಿಕೃಷ್ಟರಾಗಿದ್ದರೂ, ಅವರ್ ಪಯಿಲುಮ್ ಪಿಱಪ್ಪಿಡೈತೋಱುಮ್ – ಅವರಿಗೆ ಬರುವ ಜನ್ಮಗಳಲ್ಲೆಲ್ಲಾ, ಎಮ್ಮೈ–ನಮ್ಮನ್ನು, ಆಳುಮ್–ಆಳುವ, ಪರಮರ್‌ಕಣ್ಡೀರ್–ಪರಮಶೇಷಿಗಳೇ ಎಂದು ತಿಳಿದಿರಿ.

( ಸ-ಗಾ-ರ || )—

ಜ್ಯೋತಿಸ್ತತ್ಪರಮಂ ಸರೋಜನಯನಂ ಕ್ಷೀರಾಮ್ಬುಧೌ ಶಾಯಿನಂ-
ಭಕ್ತಾರ್ಥಂ ಹರಿಮಚ್ಯುತಂ ಶ್ರಿತವತಾಂ ಭಾಗ್ಯಂ ಹಿ ಭೋಗ್ಯಂ ಪರಮ್|
ಯೇ ಕೇಚಿಚ್ಚ ಭಜನ್ತಿ ತೇ ಹಿ ಸತತಂ ಸೇವ್ಯಾ ಭವನ್ತ್ಯೇವ ನಃ
ಪ್ರಾಪ್ಯಾಸ್ಸರ್ವಜನಿಷ್ವಪೀಹ ಪರಮಾಸ್ತೇ ಸನ್ತಿ ನಶ್ಶೇಷಿಣಃ ||

ತಾ|| (ಶ್ರೀ ಭಗವನ್ತನ ಸೌನ್ದರ್ಯವನ್ನೂ ಗುಣಾತಿಶಯವನ್ನೂ ಅನುಭವಿಸಿ ಸನ್ತುಷ್ಟರಾಗಿರುವ ಭಾಗವತರು ನಮಗೆ ಶೇಷಿಗಳೆಂದು ಹೇಳುತ್ತಾರೆ.) ದಿವ್ಯ ಕಾನ್ತಿಯುಕ್ತನಾದ ತೇಜೋಮಯ ದಿವ್ಯವಿಗ್ರಹವುಳ್ಳವನಾಗಿಯೂ, ಪುಣ್ಡರೀ ಕಾಕ್ಷನಾಗಿಯೂ, ಕ್ಷೀರಾಬ್ಧಿಶಾಯಿಯಾಗಿಯೂ. ಇರುವ ಸರ್ವೇಶ್ವರನನ್ನು ಅನು ಭವಿಸುವ ಭಾಗ್ಯಶಾಲಿಗಳು ಯಾವ ಕುಲದವರಾಗಿದ್ದರೂ ಸಕಲ ಜನ್ಮಗಳಲ್ಲೂ ನಮಗೆ ಪರಮಶೇಷಿಗಳಾದ ಮಹಾತ್ಮರು.

(೨) ಆಳುಮಾ ಪರಮನ್ನೈ ಕ್ಕಣ್ಣನ್ನೈ ಯಾೞಿಪ್ಪಿರಾನ್ ತನ್ನೈ,
ತೋಳುಮೋರ್ ನಾನ್ಗುಡೈ ತ್ತೂಮಣಿವಣ್ಣನೆಮ್ಮಾನ್
ತನ್ನೈ ತ್ತ,
ತಾಳುಮ್ ತಡಕ್ಕೈಯುಮ್ ಕೂಪ್ಪಿ ಪ್ಪಣಿಯುಮವರ್
ಕಣ್ಡೀರ್,
ನಾಳುಮ್ ಪಿಱಪ್ಪಿಡೈ ತೋಱುಮ್ಮೈ ಯಾಳುಡೈ ನಾದರೇ.

ಪ್ರ|| ಆಳುಮ್‌ಪರಮನ್ನೈ-ಆಳುವುದಕ್ಕೆ ತಕ್ಕಗುಣಾತಿಶಯವುಳ್ಳ, ಕಣ್ಣನ್ನೈ-ಅವತಾರ ಸೌಲಭ್ಯವುಳ್ಳ (ಕೃಷ್ಣರೂಪಿಯಾದ), ಆೞಿಪ್ಪಿರಾನ್‌ತನ್ನೈ-ಚಕ್ರಪಾಣಿ ಯಾದ ಸ್ವಾಮಿಯನ್ನು, ಓರ್-ಅದ್ವಿತೀಯವಾದ, ನಾನ್ಗು ತೋಳುಮ್ ಉಡೈ-ಚತುರ್ಭುಜಗಳುಳ್ಳ, ತೂ-ಪವಿತ್ರವಾದ (ಭೋಗ್ಯವಾದ), ಮಣಿ-ನೀಲರತ್ನದಂತಿ ರುವ, ವಣ್ಣನ್-ದಿವ್ಯಶರೀರವುಳ್ಳ, ಎಮ್ಮಾನ್‌ತನ್ನೈ-ನನ್ನ ಸ್ವಾಮಿಯನ್ನು, ತಡಮ್ ತಾಳುಮ್ ಕೈಯುಮ್‌ಕೂಪ್ಪಿ - ವಿಶಾಲವಾದ ಪಾದಗಳನ್ನೂ ಹಸ್ತಗಳನ್ನೂ ಜೋಡಿಸಿಕೊಂಡು (ಅಂಜಲಿ ಹಸ್ತರಾಗಿ), ಪಣಿಯುಮವರ್ ಕಣ್ಡೀರ್-ಪ್ರಣಾಮ ಮಾಡುವವರೇ ಅಲ್ಲವೇ, ನಾಳುಮ್-ಎಂದೆಂದಿಗೂ, ಪಿಱಪ್ಪಿಡೈತೋಱು-ಜನ್ಮಾವ ಕಾಶಗಳಲ್ಲೆಲ್ಲಾ, ಎಮ್ಮೈ ಆಳುಡೈ - ನಮ್ಮನ್ನು ಆಳಾಗಿ ಮಾಡಿಕೊಳ್ಳುವ, ನಾದರೇ-ಸ್ವಾಮಿಗಳೇ (ನಾಥರೇ.)

( ಸ-ಗಾ-ರ ॥ )—

ಸೇವ್ಯತ್ವೇ ಪರಮಂ ಚ ಸರ್ವಸುಲಭಂ ಕೃಷ್ಣಂ ಚ ಚಕ್ರಾನ್ವಿತಂ-
ವಿಷ್ಣುಂ ದಿವ್ಯಚತುರ್ಭುಜಂ ಮಣಿನಿಭಂ ನಾಥಂ ಚ ನಶ್ಶ್ರೀಧರಮ್ ।
ಸೇವನ್ತೇ ಭುವಿ ಯೇ ಕೃತಾಞ್ಜಲಿಪುಟಾಸ್ಸಾಷ್ಟಾಙ್ಗಮೇತೇ ಸದಾ
ಹ್ಯಸ್ಮಾಕಂ ಪ್ರತಿಜನ್ಮಸೇವ್ಯವಿಭವಾ ನಾಥಾ ಹರೇಸ್ಸುಪ್ರಿಯಾಃ ॥

ತಾ॥ (ಆವಯುವ ಕಾನ್ತಿಗೆ ವಶ್ಯರಾಗಿರುವ ಭಾಗವತರು ನಮಗೆ ಸ್ವಾಮಿಗಳೆಂದು ಹೇಳುತ್ತಾರೆ.) ಕ್ಷೀರಾಬ್ಧಿಯಿಂದ ಆಶ್ರಿತ ಸಂರಕ್ಷಣಾರ್ಥವಾಗಿ ಸೌಲಭ್ಯಾದಿ ಸಕಲಗುಣವಿಶಿಷ್ಟನಾಗಿ ಅವತರಿಸಿದ ಶ್ರೀಕೃಷ್ಣನಾಗಿಯೂ, ಚಕ್ರಪಾಣಿಯಾಗಿಯೂ, ಚತುರ್ಭುಜಯುಕ್ತನಾಗಿಯೂ, ನೀಲಮಣಿ ವರ್ಣನಾಗಿಯೂ ಇರುವ ನನ್ನ ಸ್ವಾಮಿಯನ್ನು ಸಾಂಜಲಿಬನ್ಧರಾಗಿ ಸಾಷ್ಟಾಂಗ ಪ್ರಣಾಮವಂ ಮಾಡುವ ಭಾಗವತೋತ್ತಮರೇ ನಮಗೆ ಎಂದೆಂದಿಗೂ ಸರ್ವಜನ್ಮಗಳಲ್ಲಿಯೂ ನಾಥರು.

(೩) ನಾದನ್ಯೈ ಞಾಲಮುಮ್ ವಾನಮುಮೇತ್ತುಮ್, ನಱುನ್ತುೞಾಯ್
ಪೋದನ್ಯೈ, ಪೊನ್ನೆಡುಮ್ ಶಕ್ಕರತ್ತೆನ್ದೈ ಪಿರಾನ್ ತನ್ನೈ,
ಪಾದಮ್, ಪಣಿಯವಲ್ಲಾರೈ ಪ್ಪಣಿಯುಮವರ್ ಕಣ್ಡೀರ್,
ಓದುಮ್ ಪಿಱಪ್ಪಿಡೈ ತೋಱೆಮ್ಮೈ ಯಾಳುಡೈಯಾರ್ಗಳೇ.

ಪ್ರ॥ ನಾದನ್ಯೈ-(ನಿರುಪಾಧಿಕ) ಸ್ವಾಮಿಯಾಗಿಯೂ, ಞಾಲಮುಮ್ - ಈ ಲೋಕವೂ (ಸಂಸಾರಿವರ್ಗವೂ), ವಾನಮುಮ್-ನಿತ್ಯಸೂರಿವರ್ಗವೂ, ಏತ್ತುಮ್-ಸ್ತೋತ್ರಮಾಡುವಂತೆ ಇರುವ, ನಱುಮ್‌ತುೞಾಯ್ ಪೋದನ್ಯೈ - ಪರಿಮಳವುಳ್ಳ ತುಳಸೀ ಕುಸುಮಗಳಿಂದ ಅಲಂಕೃತನಾಗಿ, ಪೊನ್-ರಮಣೀಯವಾದ (ದರ್ಶನೀಯವಾದ), ನೆಡುಮ್-ಉನ್ನತವಾದ (ಉತ್ಕೃಷ್ಟವಾದ), ಶಕ್ಕರತ್ತು-ಚಕ್ರವನ್ನು ಧರಿಸಿರುವ, ಎನ್ದೈಪಿರಾನ್‌ತನ್ನೈ - ನಮ್ಮ ಸ್ವಾಮಿಯಾದವನನ್ನು, ಪಾದಮ್ ಪಣಿಯವಲ್ಲಾರೈ - ಪಾದಗಳಲ್ಲಿ ನಮಸ್ಕರಿಸಬಲ್ಲವರನ್ನು, ಪಣಿಯುಮವರ್ ಕಣ್ಡೀರ್ - ನಮಸ್ಕರಿಸಿ ಆಶ್ರಯಿಸುವವರಲ್ಲವೆ, ಓದುಮ್ - ಶಾಸ್ತ್ರಪಠಿತವಾದ, ಪಿಱಪ್ಪಿಡೈತೋಱುಮ್ - ಜನ್ಮಾವಕಾಶಗಳಲ್ಲೆಲ್ಲಾ, ಎಮ್ಮೈ-ನಮ್ಮನ್ನು, ಆಳುಡೈಯಾರ್ಗಳ್-ಆಳುವವರು (ದಾಸರನ್ನಾಗಿ ಮಾಡಿಕೊಳ್ಳುವವರು.)

( ಸ-ಗಾ-ರ || )—

ನಾಥಂ ಭೌಮಗಣೈಶ್ಚ ಸೂರಿನಿವಹೈಸ್ಸ್ತುತ್ಯಂ ತುಲಸ್ಯಾಽಽಞ್ಚಿತಂ-
ದೀಪ್ಯದ್ದಿವ್ಯಸುದರ್ಶನಂ ಮಮ ವಿಭುಂ ಪಾದಾವನಮ್ರಾಶ್ಚ ಯೇ |
ಸೇವನ್ತೇ ಸತತಂ ಚ ತತ್ಪದನತಾಶ್ಯಾಸ್ತೋತ್ರಕರ್ತ್ರೀತ್ಯಾ ಸ್ವಯಂ-
ಪೂಜ್ಯಾಸ್ಸರ್ವಜನಿಷ್ವಪಿ ಪ್ರಿಯತಮಾ ಅಸ್ಮಾಕಮಾರ್ಯಾಸ್ಸದಾ ||

ತಾ|| ಸಂಸಾರಿಗಳೂ ನಿತ್ಯಸೂರಿಗಳೂ ಕೂಡ ಸ್ತೋತ್ರಮಾಡುವಂತೆ ಅತ್ಯನ್ತ ರಮಣೀಯ-ವಿಗ್ರಹ, ವಿಶಿಷ್ಟನಾಗಿಯೂ - ದಿವ್ಯತುಲಸೀ ಪುಷ್ಪಮಾಲಾಲಂಕೃತ ನಾಗಿಯೂ, ಚಕ್ರಪಾಣಿಯಾಗಿಯೂ ಇರುವ ನಮ್ಮ ಸ್ವಾಮಿಯಾದ. ಭಗವನ್ತನ ಚರಣಾರವಿನ್ದಯುಗಳದಲ್ಲಿ ಪ್ರಣಾಮ ಮಾಡುವ ಭಾಗ್ಯವುಳ್ಳ ಭಾಗವತರಿಗೆ ದಾಸ ಭೂತರಾದವರು ನಮಗೆ ಸರ್ವಜನ್ಮಗಳಲ್ಲಿಯೂ ಸಮಾಶ್ರಯಣೀಯರಾದ ಮಹಾನು ಭಾವರಲ್ಲವೇ !

(೪) ಉಡೈಯಾರ್ನ್ದ ವಾಡೈಯರ್ ಕಣ್ಡಿಕೈಯನುಡೈನಾಣಿನರ್,
ಪುಡೈಯಾರ್ ಪೊನ್ನೂಲಿನರ್ ಪೊನ್ಮುಡಿಯರ್
ಮತ್ರುಮ್ ಪಲ್ಕಲರ್,
ನಡೈಯಾವುಡೈ ತ್ತಿರುನಾರಣರ್ ತೊಣ್ಡರ್ ತೊಣ್ಡರ್
ಕಣ್ಡೀರ್,
ಇಡೈಯಾರ್ ಪಿಱಪ್ಪಿಡೈ ತೋಱೆಮಕ್ಕೆಮ್ ಪೆರುಮಕ್ಕಳೇ.

ಪ್ರ|| ಉಡೈ ಆರ್ನ್ದ - ಶರೀರದೊಡನೆ ಹೊಂದಿಕೊಂಡಿರುವ, ಆಡೈಯರ್- ವಸ್ತ್ರವನ್ನು ಧರಿಸಿರುವ, ಕಣ್ಡಿಕೈಯರ್ - ಕಣ್ಠಭೂಷಣವುಳ್ಳ, ಉಡೈನಾಣಿನರ್- (ರಮ್ಯವಾದ) ಉಡಿದಾರವುಳ್ಳ, ಪುಡೈ ಆರ್-ಒಂದುಕಡೆಯಲ್ಲಿ ಸೇರಿದ, ಪೊನ್ನೂ ಲಿನರ್-ಸ್ವರ್ಣಮಯವಾದ ಯಜ್ಞೋಪವೀತವುಳ್ಳ, ಪೊನ್ಮುಡಿಯರ್-ರಮಣೀಯ ವಾದ ಕಿರೀಟವುಳ್ಳ, ಮತ್ರುಮ್ - ಮತ್ತೂ, ಪಲ್ಕಲರ್ - ಅನೇಕವಿಧವಾದ ಆಭರಣಗಳನ್ನು, ನಡೈಯಾ ಉಡೈ-ಸ್ವಭಾವಸಿದ್ಧವಾಗಿ ಉಳ್ಳ, ತಿರುನಾರಣರ್ - ಶ್ರೀಮನ್ನಾರಾಯಣನ, ತೊಣ್ಡರ್-ಭಕ್ತರಿಗೆ (ದಾಸರಿಗೆ), ತೊಣ್ಡರ್ ಕಣ್ಡೀರ್- ಭಕ್ತರಾದವರಲ್ಲವೆ, ಇಡೈ ಆರ್-ನಿರನ್ತರವಾದ, ಪಿಱಪ್ಪು ಇಡೈತೋಱು-ಜನ್ಮಾವ ಕಾಶಗಳಲ್ಲೆಲ್ಲಾ, ಎಮಕ್ಕು-ನಮಗೆ, ಎಮ್‌ಪೆರುಮಕ್ಕಳೇ - ಪರಮ ಶೇಷಿಗಳೇ (ಶ್ರೇಷ್ಠರಾದ ನಾಥರೇ).

( ಸ-ಗಾ-ರ || )—

ಶ್ರೀನಾರಾಯಣಮುತ್ತರೀಯವಸನಂ ಭೂಷಾನ್ವಿತಂ ಕಣ್ಠಿಕಾ-
ಕಾಞ್ಚೀದಾಮಸುವರ್ಣಮೌಳಿವಿಲಸದ್ಯಜ್ಞೋಪವೀತಾಞ್ಚಿತಮ್ |
ಸೇವನ್ತೇ ಸತತಂ ಚ ಯೇ ಭುವಿ ಹರಿಂ ಭಕ್ತ್ಯಾತ್ಮ ತೇಷಾಂ ಸದಾ
ಒಪ್ಯಸ್ಮಾಕಂ ಪರಮಾತ್ಮ ಸರ್ವಜನಿಷು ಪ್ರಾಪ್ಯಾಶ್ಚ ಸೇವ್ಯಾಸ್ಸ್ವಯಮ್||

ತಾ|| (ದಿವ್ಯಾಭರಣಕಾನ್ತಿಗೆ ವಶ್ಯರಾಗಿರುವ ಭಾಗವತರಿಗೆ ದಾಸಭೂತರಾದ ವರು ನಮಗೆ ಪರಮಶೇಷಿಗಳೆಂದು ಹೇಳುತ್ತಾರೆ.) ದಿವ್ಯಪೀತಾಂಬರಾದಿ ವಸ್ತ್ರ ಧಾರಿಯಾಗಿಯೂ, ದಿವ್ಯಕಣ್ಠಿಕಾ ಕಾಂಚೀದಾಮ ಹಿರಣ್ಮಯ ಯಜ್ಞೋಪವೀತ ಸುವರ್ಣಕಿರೀಟಾದ್ಯನೇಕವಿಧ ರಮಣೀಯಾಭರಣ ವಿಶಿಷ್ಟನಾಗಿಯೂ, ಇರುವ ಶ್ರೀಮನ್ನಾರಾಯಣನ ಭಕ್ತರಿಗೆ ದಾಸಭೂತರಾದವರೇ ಅಲ್ಲವೆ ನಮಗೆ ನಿರನ್ತರ ವಾಗಿ ಸಕಲ ಜನ್ಮಗಳಲ್ಲೂ ಪರಮಶೇಷಿಗಳಾದ ಸ್ವಾಮಿಗಳು.

(೫) ಪೆರುಮಕ್ಕಳುಳ್ಳವರ್‌ತಮ್ ಪೆರುಮಾನೈ, ಯಮರರ್‌ಕಳ್ಕು
ಅರುಮೈಯೊೞಿಯ ವನ್ಱಾರಮುದೂಟ್ಟಿಯ ಅಪ್ಪನೈ,
ಪೆರುಮೈ ಪಿದಱ್ಱ ವಲ್ಲಾರೈ ಪ್ಪಿದಱ್ಱುಮವರ್ ಕಣ್ಡೀರ್,
ವರುಮೈಯುಮಿಮ್ಮೈಯುಮ್ ನಮ್ಮೈ ಯಳಿಕ್ಕುಮ್
ಪಿರಾಕ್ಕಳೇ.

ಪ್ರ|| ಪೆರುಮಕ್ಕಳುಳ್ಳವರ್-ಪರಮಸಾಮ್ಯದ ಮಾಹಾತ್ಮ್ಯವುಳ್ಳ ನಿತ್ಯಸೂರಿ ಗಳಿಗೆ, ತಮ್‌ಪೆರುಮಾನೈ-ಅಸಾಧಾರಣಾಧಿಪತಿಯಾದ, ಅಮರರ್‌ಕಳ್ಕು-ಮರಣ ರಹಿತರಾಗಬೇಕೆಂದು ಅಪೇಕ್ಷಿಸಿದ ದೇವತೆಗಳಿಗೆ, ಅರುಮೈಯೊೞಿಯ-ದುರ್ಲಭ ವಾಗದಂತೆ, ಅನ್ಱು-(ದುರ್ವಾಸರಿಂದ ಶಾಪೋಪಹತರಾದ) ಆ ಸಮಯದಲ್ಲಿ, ಆರ್ ಅಮುದು ಊಟ್ಟಿಯ-ಪೂರ್ಣವಾಗಿ ಅಮೃತವನ್ನು ಕುಡಿಯುವಂತೆ ಮಾಡಿದ, ಅಪ್ಪನೈ-ಸ್ವಾಮಿಯನ್ನು, ಪೆರುಮೈ-ಅವನ ಮಾಹಾತ್ಮ್ಯವನ್ನು, ಪಿದಱ್ಱವ ಲ್ಲಾರೈ-ಪ್ರೀತ್ಯತಿಶಯದಿಂದ ಅಕ್ರಮವಾಗಿ ಹೇಳುತ್ತ ಸ್ತೋತ್ರಮಾಡಬಲ್ಲ ಭಾಗ ವತರನ್ನು, ಪಿದಱ್ಱುಮವರ್‌ಕಣ್ಡೀರ್-ಅಕ್ರಮವಾಗಿ ಪ್ರಶಂಸೆಮಾಡಬಲ್ಲವರಲ್ಲವೆ, ವರುಮೈಯುಮ್ ಇಮ್ಮೈಯುಮ್-ಪರಲೋಕದಲ್ಲೂ ಇಹಲೋಕದಲ್ಲೂ, ನಮ್ಮೈ-ನಮ್ಮನ್ನು, ಅಳಿಕ್ಕುಮ್-ಉಜ್ಜೀವಿಸುವಂತೆ ಮಾಡುವ, ಪಿರಾಕ್ಕಳೇ-ಉಪಕಾರಕರು.

( ಸ-ಗಾ-ರ ॥ )—

ನಾಥಂ ಸೂರಿವರಾಧಿಪಂ ಸುರಗಣಾನ್ ಪೂರ್ಣಾಮೃತಪ್ರಾಶನಾ –
ದೃಕ್ಷಿತ್ವಾಽತ್ಯುಪಕಾರಿಣಂ ಬಹುತಮಾಂ ಶಂಸನ್ತಿ ಯೇ ತ್ವಕ್ರಮಾತ್।
ತೇಷಾಂ ಸ್ತೋತ್ರಪರಾಯಣಾಃ ಕಿಲ ಭವನ್ತ್ಯಸ್ಮಾಕಮಾರ್ಯಾಭುವಿ
ಪ್ರಾಜ್ಞಾಸ್ತೇಽಮೃತಮಾಸ್ತಥಾ ದಿವಿ ಚ ತೇ ಹ್ಯುಜ್ಜೀವಯನ್ತ್ಯೇವ ನಃ ॥

ತಾ॥ ನಿತ್ಯಸೂರಿಗಳಿಗೆ ಅಧಿಪತಿಯಾಗಿಯೂ, ದೇವತೆಗಳಿಗೆ ಪೂರ್ಣಾಮೃತ ಪ್ರಾಶನದಿಂದ ಮಹೋಪಕಾರ ಮಾಡಿದವನಾಗಿಯೂ ಇರುವ ಸ್ವಾಮಿಯನ್ನು ಪ್ರೀತ್ಯತಿಶಯದಿಂದ ಮನಸ್ಸುಬಂದಂತೆ ಅಕ್ರಮವಾಗಿ ಸ್ತೋತ್ರಮಾಡಬಲ್ಲ ಭಾಗವತರನ್ನು ಸ್ತೋತ್ರಮಾಡಬಲ್ಲವರು ಪರಲೋಕದಲ್ಲೂ ಇಹಲೋಕದಲ್ಲೂ ನಮ್ಮನ್ನು ಉಜ್ಜೀವಿಸುವಂತೆ ಮಾಡುವ ಮಹೋಪಕಾರಕರು. (ಅವರೇ ನಮಗೆ ಸೇವ್ಯರಾದ ಉತ್ತಾರಕಾಚಾರ್ಯರೆಂದು ಭಾವವು.)

(೬) ಆಳಿಕ್ಕುಮ್ ಪರಮನೈ ಕ್ಕಣ್ಣನೈ ಯಾೞಿಪ್ಪಿರಾನ್ ತನ್ನೈ,
ತುಳಿಕ್ಕುನ್ನಱುಙ್ಕಣ್ಣಿ ತ್ತೂಮಣಿವಣ್ಣನೆಮ್ಮಾನ್ ತನ್ನೈ,
ಒಳಿಕ್ಕೊಣ್ಡಚೋದಿಯೈ ಯುಳ್ಳತ್ತುಕ್ಕೊಳ್ಳುಮವರ್
ಕಣ್ಡೀರ್,
ಶಲಿಪ್ಪಿನ್ಱಿ ಯಾಣ್ಡೆಮ್ಮೈಚ್ಚನ್ಮಶನ್ಮಾನ್ತರಙ್ಕಾಪ್ಪರೇ.

ಪ್ರ॥ ಆಳಿಕ್ಕುಮ್ ಪರಮನೈ – ಉಪಕಾರಮಾಡುವುದರಲ್ಲಿ ಶ್ರೇಷ್ಠನಾದವನನ್ನು, ಕಣ್ಣನೈ-ಭವ್ಯನಾದ ಶ್ರೀಕೃಷ್ಣನನ್ನು, ಆೞಿಪ್ಪಿರಾನ್‌ತನ್ನೈ – ಚಕ್ರಪಾಣಿಯಾದ ಸ್ವಾಮಿಯನ್ನು, ತುಳಿಕ್ಕುಮ್‌ನಱುಙ್ಕಣ್ಣಿ–ಮಧುಸ್ಯನ್ದಿಯಾಗಿ ಪರಿಮಳವುಳ್ಳ ಮಾಲೆಗಳನ್ನು ಧರಿಸಿರುವ, ತೂಮಣಿವಣ್ಣನ್–ನಿರ್ಮಲವಾದ ಮಾಣಿಕ್ಯದಂತೆ ವರ್ಣವುಳ್ಳ, ಎಮ್ಮಾನ್ ತನ್ನೈ – ನನ್ನ ಸ್ವಾಮಿಯನ್ನು, ಒಳಿಕ್ಕೊಣ್ಡ – ಅತ್ಯನ್ತ ಪ್ರಕಾಶವುಳ್ಳ, ಶೋದಿಯೈ–ಜ್ಯೋತಿಸ್ಸ್ವರೂಪನನ್ನು, ಉಳ್ಳತ್ತು–ಮನಸ್ಸಿನಲ್ಲಿ, ಕೊಳ್ಳುಮವರ್ ಕಣ್ಡೀರ್–ಅನುಭವಿಸುವವರಲ್ಲವೆ, ಎಮ್ಮೈ ನಮ್ಮನ್ನು, ಶಲಿಪ್ಪಿನ್ಱಿ –ನಿಶ್ಚಲವಾಗಿರುವಂತೆ, ಆಣ್ಡು–ಆಳಿ, ಶನ್ಮಶನ್ಮಾನ್ತರಮ್–ಸಕಲ ಜನ್ಮಗಳಲ್ಲೂ, ಕಾಪ್ಪರ್–ರಕ್ಷಿಸುವವರು.

( ಸ-ಗಾ-೩ || )—

ದಾತಾರಂ ಪರಮಂ ಹರಿಂ ಯದುಪತಿಂ ಕೃಷ್ಣಂ ಚ ಚಕ್ರಾಙ್ಕಿತಂ
ಸೌಗನ್ಧ್ಯರ್ದ್ರ್ಯಸುಮಸ್ರಜಂ ಮಣಿನಿಭಂ ನಾಥಂ ಚ ಮೇ ಶ್ರೀಧರಮ್ |
ಜ್ಯೋತಿಸ್ತತ್ಪರಮುಜ್ಜ್ವಲಂ ಹೃದಿ ತು ಯೇ ಕುರ್ವನ್ತಿ ನಿತ್ಯಂ ಚ ತೇ
ಸತ್ಯಂ ನಃ ಪರಿಪಾಲಯನ್ತಿ ಸತತಂ ಚಾಜನ್ಮಜನ್ಮಾನ್ತರಮ್ ||

ತಾ|| (ಅವನ ಸೌನ್ದರ್ಯಾದಿಗುಣಗಳನ್ನೆಲ್ಲಾ ಚೆನ್ನಾಗಿ ಅನುಭವಿಸುವವರು ನಮಗೆ ರಕ್ಷಕರೆಂದು ಹೇಳುತ್ತಾರೆ.) ಪರಮೌದಾರ್ಯವುಳ್ಳವನಾಗಿಯೂ, ಚಕ್ರಪಾಣಿಯಾಗಿಯೂ, ದಿವ್ಯಮಾಲಾಲಂಕೃತನಾಗಿಯೂ, ಸ್ವಚ್ಛಮಾಣಿಕ್ಯವರ್ಣನಾಗಿಯೂ ಇರುವ ಶ್ರೀಕೃಷ್ಣರೂಪಿಯಾದ ದಿವ್ಯ ತೇಜೋಮಯನಾದ ನನ್ನ ಸ್ವಾಮಿಯನ್ನು ಮನಸ್ಸಿನಲ್ಲಿ ಧ್ಯಾನಮಾಡಿ ಅನುಭವಿಸುವವರು ನಮ್ಮನ್ನು ಯಾವಾಗಲೂ ಸಕಲಜನ್ಮಗಳಲ್ಲೂ ರಕ್ಷಿಸುವ ಮಹಾತ್ಮರು.

(೭) ಶನ್ಮಶನ್ಮಾನ್ತರಪ್ಕಾತ್ತಡಿಯಾರ್‌ಕಳ್ಳೈ ಕ್ಕೊಣ್ಡು ಪ್ಪೋಯ್,
ತನ್ಮೈ ಪೆಱುತ್ತಿ ತ್ತನ್ ತಾಳಿಣೈಕ್ಕೀೞ್ ಕ್ಕೊಳ್ಳುಮಪ್ಪನೈ,
ತೊನ್ಮೈ ಪಿದಱ್ಱ ವಲ್ಲಾರೈ ಪ್ಪಿದಱ್ಱುಮವರ್ ಕಣ್ಡೀರ್,
ನನ್ಮೈ ಪೆಱುತ್ತೆಮ್ಮೈ ನಾಳುಯ್ಯಕ್ಕೊಳ್ಕಿನ್ಱ ನಮ್ಬರೇ.

ಪ್ರ|| ಶನ್ಮಶನ್ಮಾನ್ತರಮ್-ಜನ್ಮಪರಂಪರೆಗಳು, ಕಾತ್ತು- ಉಂಟಾಗದಂತೆ ತಡೆದು, ಅಡಿಯಾರ್‌ಕಳ್ಳೈ - ಶೇಷತ್ವಜ್ಞಾನವುಳ್ಳವರನ್ನು, ಕೊಣ್ಡುಪೋಯ್ - (ಪರಮಪದಕ್ಕೆ) ತೆಗೆದುಕೊಂಡುಹೋಗಿ, ತನ್ಮೈಪೆಱುತ್ತಿ-ಸ್ವರೂಪಾವಿರ್ಭಾವವನ್ನುಂಟುಮಾಡಿ, ತನ್‌ತಾಳಿಣೈಕ್ಕೀೞ್-ತನ್ನ ಪಾದಯುಗ್ಮದ ಕೆಳಗೆ, ಕೊಳ್ಳುಮ್-ಕೈಂಕರ್ಯಮಾಡುವಂತೆ ಸ್ವೀಕರಿಸುವ, ಅಪ್ಪನೈ-ಸ್ವಾಮಿಯನ್ನು, ತೊನ್ಮೈ-ಸ್ವಾಭಾವಿಕವಾದ ಅವನ ಉಪಕಾರಕತ್ವವನ್ನು, ಪಿದಱ್ಱವಲ್ಲಾರೈ-ಹೇಳಿ ಅಕ್ರಮವಾಗಿ ಸ್ತೋತ್ರಮಾಡಬಲ್ಲವರನ್ನು ಪಿದಱ್ಱುಮವರ್‌ಕಣ್ಡೀರ್ - (ಪ್ರೇಮಾತಿಶಯದಿಂದ) ಮನಸ್ಸುಬಂದಂತೆ ಸ್ತೋತ್ರಮಾಡುವವರಲ್ಲವೆ, ಎಮ್ಮೈ-ನಮ್ಮನ್ನು, ನನ್ಮೈಪೆಱುತ್ತು - ( ಮುಕ್ತರೊಡನೆ ಸಂಗಮವೆಂಬ ) ಭಾಗ್ಯವನ್ನು ಹೊಂದುವಂತೆ ಮಾಡಿ, ನಾಳ್ - ಸರ್ವಕಾಲದಲ್ಲೂ, ಉಯ್ಯಕ್ಕೊಳ್‌ಕಿನ್ಱ - ಉಜ್ಜೀವಿಸುವಂತೆ ಮಾಡುವ, ನಮ್ಬರ್-ವಿಶ್ವಾಸಪಾತ್ರರು

( ಸ-ಗಾ-ರ ॥ —

ನಾನಾಜನ್ಮಸು ಭಕ್ತವರ್ಗಸರಣಿಂ ನೀತ್ವಾ ಚ ಸಾಕ್ಷಾತ್ಕೃತಿಂ-
ದತ್ವಾ ಸ್ವಾಂಘ್ರಿಸರೋಜಯುಗ್ಮಪದವೀಸೇವಾಂ ಚ ಕೃತ್ವಾ ಸ್ವಯಮ್ ।
ರಕ್ಷನ್ತಂ ಪ್ರಭುಮಚ್ಯುತಂ ಸ್ತುತಿಪರಾಶ್ಶಂಸನ್ತಿ ಯೇ ತತ್ಸ್ತುತಿಂ
ಕುರ್ವನ್ತಃ ಕಿಲ ನಸ್ಥಿರಂ ಪ್ರಭುವರಾ ವಿಶ್ವಾಸಪಾತ್ರಂ ಪರಮ್ ॥

ತಾ॥ ಜನ್ಮ ಜನ್ಮಗಳಲ್ಲೂ ತಾನು ಬಂದು ಅವತರಿಸಿ ಆಶ್ರಿತರನ್ನು ಪರಮ ಪದಕ್ಕೆ ತೆಗೆದುಕೊಂಡು ಹೋಗಿ ದಿವ್ಯಜ್ಞಾನಸಂಪನ್ನರಾಗುವಂತೆ ಮಾಡಿ, ತನ್ನ ಪಾದಯುಗಳದಲ್ಲಿ ನಿತ್ಯ ಕೈಂಕರ್ಯವಂ ಮಾಡುವಂತೆ ಮಹೋಪಕಾರಮಾಡುವ ಸ್ವಾಮಿಯನ್ನು ಸ್ತೋತ್ರಮಾಡಬಲ್ಲ ಭಾಗವತರನ್ನು ಪ್ರಶಂಸೆಮಾಡುವವರೇ ನಮಗೆ ಮುಕ್ತಸಂಗಮರೂಪವಾದ ಭಾಗ್ಯವನ್ನುಂಟುಮಾಡಿ ಸರ್ವಕಾಲದಲ್ಲೂ ನಮ್ಮನ್ನು ಉಜ್ಜೀವಿಸುವಂತೆ ಮಾಡುವ ವಿಶ್ವಾಸಪಾತ್ರರು.

(೮) ನಮ್ಬನೈ ಞಾಲಮ್ಪಡೈತ್ತವನೈ ತ್ತಿರುಮಾರ್ಬನೈ,
ಉಮ್ಬರುಲಕಿನಿಲ್ ಯಾರ್ಕ್ಕುಮುಣರ್ವರಿಯಾನ್ ತನ್ನೈ,
ಕುಮ್ಬನರಕರ್ಕಳೇತ್ತುವರೇಲುಮವರ್ ಕಣ್ಡೀರ್
ಎಮ್ಬಲ್ಪಿರಪ್ಪಿಡೈ ತೋರೆಮ್ ತೊಲುಕುಲಮ್ ತಾಙ್ಗಳೇ.

ಪ್ರ॥ ನಮ್ಬನೈ – (ನಿರುಪಾಧಿಕ) ಶರಣ್ಯನಾದವನನ್ನು, ಞಾಲಮ್ಪಡೈತ್ತ ವನೈ–ಜಗತ್ಸೃಷ್ಟಿಮಾಡಿದವನನ್ನು, ತಿರುಮಾರ್ಬನೈ – ಲಕ್ಷ್ಮೀದೇವಿಯನ್ನು ವಕ್ಷಸ್ಸ್ಥಲದಲ್ಲಿ ಧರಿಸಿರುವವನನ್ನು, ಉಮ್ಬರುಲಕಿನಿಲ್ – ದೇವತೆಗಳ ಊರ್ಧ್ವಲೋಕಗಳಲ್ಲಿ, ಯಾರ್ಕ್ಕುಮ್ – ಯಾರಿಗೂ (ಎಂತಹ ಜ್ಞಾನಿಗಳಿಗೂ), ಉಣರ್ವು ಅರಿಯಾ ತನ್ನೈ–ತಿಳಿಯಲಶಕ್ಯನಾದವನನ್ನು, ಕುಮ್ಬನರಕರ್ಕಳುಮ್–ಕುಂಭೀ ಪಾಕವೆಂಬ ನರಕದಲ್ಲಿ ವಾಸಮಾಡುವ ಪಾಪಿಷ್ಠರಾದಾಗ್ಯೂ, ಏತ್ತುವರೇಲ್–ಸ್ತೋತ್ರಮಾಡಿದರೆ, ಅವರ್ ತಾಙ್ಗಳ್ ಕಣ್ಡೀರ್–ಅವರೇಯಲ್ಲವೆ, ಎಮ್–ನಮ್ಮ, ಪಲ್ಪಿರಪ್ಪಿಡೈತೋರುಮ್ – ನಾನಾವಿಧ (ಅನೇಕ) ಜನ್ಮಗಳಲ್ಲೆಲ್ಲಾ, ಎಮ್ ತೊಲುಕುಲಮ್ – ನಾವು ಸೇವಿಸುವುದಕ್ಕೆ ಅರ್ಹರಾದ ಉತ್ಕೃಷ್ಟಕುಲದವರು.

( ಸ-ಗಾ-ರ || —

ಪೂರ್ಣಂ ಚಾಖಿಲವಿಶ್ವಸೃಷ್ಟಿನಿರತಂ ಶ್ರೀವತ್ಸವಕ್ಷಸ್ಸ್ಥಲಂ
ದೇವಾನಾಮಪಿ ದುರ್ಗಮಂ ಮತಿಮತಾಂ ಶಂಸನ್ತಿ ಚೇನ್ನಾರಕೇ |
ಯೇ ಕೇಚಿತ್ಕಿಲ ತೇಽಪಿ ಜನ್ಮಸದಶಿಷ್ವಸ್ಮಾಕವಿಾಶಾಸ್ಸ್ವಯಂ
ಸೇವ್ಯಾ ಏವ ಹಿ ಸತ್ಯಮೇತದಿತಿ ಮೇ ದಿವ್ಯಂ ಮತಂ ಪಾವನಮ್ ||

ತಾ|| (ಅವನ ಶ್ರಿಯಃಪತಿತ್ವ ಮಹಾಗುಣದಿಂದ ಜಿತರಾದ ಭಾಗವತರು ನನಗೆ ನಾಥರೆಂದು ಹೇಳುತ್ತಾರೆ.) ನಿರುಪಾಧಿಕ ಶರಣ್ಯನಾಗಿಯೂ, ಲೋಕಸೃಷ್ಟಿ ಮಾಡಿದವನಾಗಿಯೂ, ಲಕ್ಷ್ಮೀದೇವಿಯನ್ನು ವಕ್ಷಸ್ಸ್ಥಲದಲ್ಲಿ ಧರಿಸಿದವನಾಗಿಯೂ, ದಿವ್ಯಜ್ಞಾನ ಸಂಪನ್ನರಾದ ದೇವತೆಗಳಿಗೂ ಅಗೋಚರನಾಗಿಯೂ ಇರುವ ಸ್ವಾಮಿಯನ್ನು, ಯಾವ ಕುಂಭೀಪಾಕಾದಿ ನರಕವಾಸಿಗಳಾದ ಪಾಪಿಷ್ಠರು ಸ್ತೋತ್ರಮಾಡಿದಾಗ್ಯೂ ಅವರೇ ನಮಗೆ ಸಕಲ ಜನ್ಮಗಳಲ್ಲೂ ಸಂಸೇವ್ಯರಾದ ಉತ್ಕೃಷ್ಟ ಕುಲ ತಿಲಕರು. (ಅನ್ತಹ ಭಾಗವತರಿಗೆ ಜನ್ಮದೋಷವೂ ಇಲ್ಲ. ಅವರೇ ಉತ್ಕೃಷ್ಟ ಕುಲದವರೆಂದು ಭಾವವು.)

(೯) ಕುಲನ್ದಾಙ್ಗು ಶಾದಿಕಳ್ ನಾಲಿಲುಮ್ ಕೀೞಿೞಿನ್ದು, ಎತ್ತನೈ
ನಲನ್ದಾನಿಲಾದ ಶಣ್ಡಾಳ ಶಣ್ಡಾಳರ್ಗಳಾಕಿಲುಮ್,
ವಲನ್ದಾಙ್ಗು ಶಕ್ಕರತ್ತಣ್ಣಲ್ ಮಣಿವಣ್ಣರ್ಕ್ಕಾಳೆನ್ಱು, ಉಳ್
ಕಲನ್ದಾರಡಿಯಾರ್ ತಮ್ಮಡಿಯಾರೆಮ್ಮಡಿಕಳೇ.

ಪ್ರ|| ಕುಲಮ್-(ಪರಸ್ಪರ ವಿವಾಹದಿಂದ) ಸಕಲಕುಲಗಳಿಗೂ, ತಾಙ್ಗು-ಆಧಾರಭೂತವಾದ, ಶಾದಿಕಳ್-ಬ್ರಾಹ್ಮಣಾದಿಜಾತಿಗಳು, ನಾಲಿಲುಮ್-ನಾಲ್ಕಕ್ಕಿಂತಲೂ, ಕೀೞಿೞಿನ್ದು-ಕೆಳಗೆ ಇಳಿದು, ಎತ್ತನೈ ನಲಮ್ ತಾನಿಲಾದ-ಎಷ್ಟು ನಿಕೃಷ್ಟರಾಗಿದ್ದಾಗ್ಯೂ ಆ ನಿಕರ್ಷಜ್ಞಾನವಿಲ್ಲದಂತೆ ಮೂಢತಮರಾದ, ಶಣ್ಡಾಳ ಶಣ್ಡಾಳರ್ ಕಳಾಕಿಲುಮ್-ಚಣ್ಡಾಳರಿಗೂ ಚಣ್ಡಾಳರಂತೆ ತೋರುವವರಾದರೂ, ವಲಮ್ ತಾಙ್ಗು-ಬಲಗಡೆಯಲ್ಲಿ ಧರಿಸಲ್ಪಟ್ಟ, ಶಕ್ಕರತ್ತು-ಚಕ್ರವುಳ್ಳ, ಅಣ್ಣಲ್-ಸ್ವಾಮಿಯಾದ, ಮಣಿವಣ್ಣರ್ಕ್ಕು-ನೀಲಮಣಿವರ್ಣನಾದ ಭಗವನ್ತನಿಗೆ, ಆಳ್-(ನಾವು) ಶೇಷಭೂತರು, ಎನ್ಱು-ಎಂದು ಭಾವಿಸಿ, ಉಳ್ ಕಲನ್ದಾರ್ - ಅನನ್ಯಪ್ರಯೋಜನರಾಗಿ ಆಶ್ರಯಿಸಿದವರಿಗೆ, ಅಡಿಯಾರ್ ತಮ್-ದಾಸಭೂತರಾದವರಿಗೆ, ಅಡಿಯಾರ್-ದಾಸಭೂತರು, ಎಮ್ ಅಡಿಯಾರ್-ನಮಗೆ ಸ್ವಾಮಿಗಳು.

( ಸ–ಗಾ–ರ || )—

ಚಾತುರ್ವರ್ಣ್ಯಕುಲಾಪಕೃಷ್ಟಜನನಾಶ್ಚಣ್ಡಾಲಚಣ್ಡಾಲಕಾ-
ಶ್ಚಾಪಿ ಶ್ರೀಹರಿಮಚ್ಯುತಂ ಮಣಿನಿಭಂ ಚಕ್ರಾನ್ವಿತಂ ಸಂಶ್ರಿತಾಃ |
ಕೈಙ್ಕರ್ಯೇಷು ರತಾಶ್ಚ ಯೇ ಭುವಿ ಜನಾಸ್ತೇಷಾಂ ಚ ದಾಸಾತ್ಮನಾಂ
ದಾಸಾಸ್ಸ್ಯುಃ ಪರಮಾಶ್ಚ ಶೇಷವಿಭವಾ ಅಸ್ಮಾಕಮಾರ್ಯಾಸ್ಸದಾ ||

ತಾ|| ಚಾತುರ್ವರ್ಣ್ಯಾದಿ ಜಾತಿಗಳಿಗಿಂತಲೂ ಕೆಳಗೆ ಹುಟ್ಟಿ ಎಷ್ಟು ನಿಕೃಷ್ಟರಾಗಿದ್ದಾಗ್ಯೂ, ಚಂಡಾಲ ಚಂಡಾಲರಾಗಿದ್ದಾಗ್ಯೂ—ಶ್ರೀ ಚಕ್ರಪಾಣಿಯಾಗಿ ನೀಲ ಮಣಿವರ್ಣನಾಗಿರುವ ನಮ್ಮ ಸ್ವಾಮಿಗೆ ಶೇಷಭೂತರಾಗಿ ಅನ್ತರಂಗ ಕೈಂಕರ್ಯ ಸಕ್ತರಾದ ಭಕ್ತರಿಗೆ ದಾಸಭೂತರಾದವರಿಗೆ ದಾಸಭೂತರು ನಮಗೆ ಸ್ವಾಮಿಗಳು. (ನಾವು ಅನ್ತಹ ಮಹಾನುಭಾವರಿಗೆ ಚರಮಾವಧಿದಾಸರೆಂದು ಭಾವವು.)

(೧೦) ಅಡಿಯಾರ್ನ್ದ ವೈಯಮುಣ್ಡಾಲಿಲೈ ಯನ್ನವಶಂ
ಶೆಯ್ಯುಮ್,
ಪಡಿಯಾದುಮಿಲ್ ಕುೞವಿಪ್ಪಡಿ ಯೆನ್ದೈಪಿರಾನ್ ತನಕ್ಕು,
ಅಡಿಯಾರಡಿಯಾರ್ ತಮ್ಮಡಿಯಾರಡಿಯಾರ್ ತಮ-
ಕ್ಕಡಿಯಾರಡಿಯಾರ್ ತಮ್ಮಡಿಯಾರಡಿಯೋಙ್ಗಳೇ.

ಪ್ರ|| ಅಡಿ ಆರ್ನ್ದ – (ತ್ರಿವಿಕ್ರಮಾವತಾರದಲ್ಲಿ) ತನ್ನ ಪಾದಗಳೊಡನೆ ಸೇರಿದ, ವೈಯಮ್– ಭೂಮಿಯನ್ನು, ಉಣ್ಡು – (ಪ್ರಳಯಕಾಲದಲ್ಲಿ) ಭಕ್ಷಿಸಿ, ಆಲಿಲೈ–ಒಂದು ಆಲದ ಎಲೆಯಮೇಲೆ, ಅನ್ನವಶಂ ಶೆಯ್ಯುಮ್–ಭಕ್ಷಿಸಿದುದು ಜೀರ್ಣವಾಗದಂತೆ ನಿದ್ರೆಮಾಡುತ್ತಿರುವ, ಪಡಿಯಾದುಮ್ ಇಲ್–ತನಗೆ ಸಮಾನವಾದುದು ಯಾವುದೂ ಇಲ್ಲದಂತಿರುವ, ಕುೞವಿಪ್ಪಡಿ–ಶಿಶುರೂಪವನ್ನು ಧರಿಸಿರುವ, ಪಿರಾನ್ ಎನ್ದೈತನಕ್ಕು – ನಮ್ಮ ತಂದೆಯಾದ ಸ್ವಾಮಿಗೆ, ಅಡಿಯಾರಡಿಯಾರ್ ತಮ್–ದಾಸರಾದವರಿಗೆ ದಾಸಭೂತರಾದವರಿಗೆ, ಅಡಿಯಾರಡಿಯಾರ್ ತಮಕ್ಕು–ದಾಸರಿಗೆ ದಾಸರಾದವರಿಗೆ, ಅಡಿಯಾರಡಿಯಾರ್ ತಮ್–ದಾಸರಿಗೆ ದಾಸರಾದವರಿಗೆ, ಅಡಿಯಾರ್–ದಾಸರಾದವರು, ಅಡಿಯೋಙ್ಗಳೇ–ನಾವುಗಳೇ.

( ಸ–ಗಾ–ರ || )—

ಪಾದಾಕ್ರಾನ್ತಜಗತ್ತ್ರಿತಿಂ ಚ ಸಕಲಾಂ ಭುಕ್ತ್ವಾ ಸ್ವಯಂ ತದ್ವಶಾ-
ದ್ಪಾಲಂ ತಂ ವಟಪತ್ರಶಾಯಿನಮಪಿ ಶ್ರೀಶಂ ಹರಿಂ ನಿಸ್ಸಮಮ್ |
ಅಸ್ಮಾಕಂ ಪ್ರಭುಮಾಶ್ರಿತಾ ಭುವಿ ಚ ಯೇ ತದ್ದಾಸದಾಸಾನುಗಾ-
ಸ್ತದ್ದಾಸಾಶ್ಚ ತದೀಯದಾಸ್ಯನಿರತಾ ನಿತ್ಯಂ ಚ ನಾಥಾ ಹಿ ನಃ ||

ತಾ|| ತ್ರಿವಿಕ್ರಮಾವತಾರದಲ್ಲಿ ತನ್ನ ಪಾದಗಳಿಂದ ಭೂಮಿಯನ್ನು ಅಳೆದು ಪ್ರಳಯಕಾಲದಲ್ಲಿ ಭಕ್ಷಿಸಿ ವಟಪತ್ರಶಾಯಿಯಾಗಿ, ನಿಸ್ಸಮವಾದ ಶಿಶುರೂಪವನ್ನು ಧರಿಸಿರುವ ನಮ್ಮ ಸ್ವಾಮಿಗೆ ದಾಸಾನುದಾಸತದ್ದಾಸಾನುದಾಸ-ತದ್ದಾಸದಾಸಚರ ಮಾವಧಿದಾಸರು ನಾವುಗಳು.

(೧೧) ಅಡಿಯೋಙ್ಗ ನೂಱ್ಱುವರ್ ವೀಯ ವನ್ಱೈವರ್ಕ್ಕ್
ರುಳ್‌ಶೆಯ್ದ
ನೆಡಿಯೋನ್ನೈ, ತ್ತೆನ್‌ಕುರುಕೂರ್ ಚ್ಚಡಕೋಪನ್
ಕುಱ್ಱೇವಲ್‌ಕಳ್,
ಅಡಿಯಾರ್‌ನ್ದ ವಾಯಿರತ್ತುಳ್ಳಿವೈ ಪತ್ತವನ್
ತೊಣ್ಡರ್ಮೇಲ್,
ಮುಡಿವಾರ ಕ್ಕಱ್ಕಿಱ್ಕಿಲ್ ಶನ್ಮಮ್ ಶೆಯ್ಯಾಮೈ
ಮುಡಿಯುಮೇ.

ಪ್ರ|| ಅಡಿಯೋಙ್ಗ–ತಮ್ಮ ರಾಜ್ಯಪ್ರತಿಷ್ಠೆಯು ಬೆಳೆಯುವಂತೆ, ನೂಱ್ಱುವರ್–ದುರ್ಯೋಧನಾದಿಗಳು ನೂರುಮಂದಿ, ವೀಯ-ನಾಶಹೊಂದುವಂತೆ, ಅನ್ಱು–ಆ ಕಾಲದಲ್ಲಿ, ಐವರ್ಕ್ಕ್–ಐದುಮಂದಿ ಪಾಣ್ಡವರಿಗೆ, ಅರುಳ್‌ಶೆಯ್ದ–ಕೃಪೆಮಾಡಿದ, ನೆಡಿಯೋನ್ನೈ–ಮಹಾ ಮಹಿಮನನ್ನು ಕುರಿತು, ತೆ಼ ಕುರುಕೂರ್–ದಿವ್ಯಕುರುಕಾ ಪುರಿಗೆ ನಿರ್ವಾಹಕರಾದ, ಶಡಕೋಪನ್ – ನಮ್ಮಾಳ್ವಾರ್, ಕುಱ್ಱೇವಲ್‌ಕಳ್ – ಅನ್ತರಙ್ಗವೃತ್ತಿರೂಪವಾಗಿ, ಅಡಿ ಆರ್‌ನ್ದ–ಪಾದಬನ್ಧಾದಿ ಲಕ್ಷಣಪೂರ್ಣವಾದ, ಆಯಿರತ್ತುಳ್ – ಸಹಸ್ರಪದ್ಯಮಾಲೆಯೊಳು, ಅವನ್ ತೊಣ್ಡರ್‌ಮೇಲ್ – ಅವನ ಭಕ್ತರಮೇಲೆ, ಮುಡಿವು-ರಚಿಸಲ್ಪಟ್ಟು ಮುಗಿದಿರುವ, ಇವ್ವೈಪತ್ತು – ಈ ದಶಕ ವನ್ನು, ಆರ – ಆದರದೊಡನೆ, ಕಱ್ಕಿಱ್ಕಿಲ್ – ಅಭ್ಯಾಸಮಾಡಿದರೆ, ಶನ್ಮಮ್ ಶೆಯ್ಯಾಮೈ–ಜನ್ಮವುಂಟಾಗದಂತೆ, ಮುಡಿಯುಮ್–ಮುಗಿಯುವುದು.

( ಸ–ಗಾ–ರ || )—

ದೃಪ್ಯದ್ದುಷ್ಟಶತಂ ವಿನಾಶ್ಯ ಚ ತದಾ ಪಞ್ಚಾಶ್ರಿತಾನಾಂ ದಯಾ–
ಸಿನ್ಧುಂ ಬನ್ಧುಮುದಾರಸದ್ಗುಣನಿಧಿಂ ಸ್ತೋತುಂ ಶಠಾರಿರ್ಹರಿಮ್ |
ಚಕ್ರೇ ಶ್ರೀಕುರುಕೇಶ್ವರಃ ಕೃತಿತತಿಂ ಸಾಹಸ್ರಪದ್ಯಾವಳಿಂ !
ತತ್ರೇದಂ ದಶಕಂ ತದೀಯಪರಮುಖ್ಯಸ್ಯಾಶ್ರಿತಾ ಮೋಕ್ಷಗಾಃ ||

ತಾ || (ಭಾಗವತಶೇಷತ್ವಪ್ರತಿಪಾದಕವಾದ ಈ ದಶಕದ ಪಠನದಿಂದ ಸಂಸಾರಬನ್ಧನಿವೃತ್ತಿಯಾಗುವುದೆಂದು ಹೇಳುತ್ತಾರೆ.) ದುರಹಂಕಾರ ಗ್ರಸ್ತರಾಗಿದ್ದ ನೂರುಮಂದಿ ಕೌರವರನ್ನು ನಾಶಪಡಿಸಿ ಆಶ್ರಿತರಾದ ಪಾಂಡವರೈದು ಮಂದಿಯನ್ನು ರಕ್ಷಿಸಿದ ದಯಾಸಿನ್ಧುವಾದ ಉದಾರ ಬನ್ಧುವಾಗಿಯೂ, ಸಕಲ ಕಲ್ಯಾಣ ಗುಣನಿಧಿಯಾಗಿಯೂ ಇರುವ ಸ್ವಾಮಿಯನ್ನು ಶ್ರೀಕುರುಕಾಪುರಿಯ ನಿರ್ವಾಹಕರಾದ ಶಠಾರಿಮುನಿವರ್ಯರು ಸ್ತೋತ್ರಮಾಡಲುದ್ದೇಶಿಸಿ ರಚಿಸಿದ ಸಹಸ್ರಪದ್ಯಮಾಲೆಯೊಳು ಭಾಗವತಶೇಷತ್ವಪರವಾದ ಈ ದಶಕವನ್ನು ಪಠನಮಾಡಿದರೆ ಜನ್ಮನಿವೃತ್ತಿಯಾಗುವುದು.

( ದ್ರ–ಉ–ಸಂ || )—

ತಚ್ಛ್ರೋಕಶಾನ್ತಿವಿಧಯೇ ಹರಿಣಾ ಪ್ರಸಾದಾ–
ದಾವಿಷ್ಕೃತಾನ್ ಸ್ವಗುಣಚೇಷ್ಟಿತಭೋಗಶೀಲಾನ್ |
ಆಲೋಕ್ಯ ವೈಷ್ಣವಜನಾನ್ ಮುನಿರಾತ್ಮನಾಥಾ–
ನಾಖ್ಯಾಯ ತಾನತಿಜಹರ್ಷ ಚ ಸಪ್ತಮೇ ಸಃ ||

( ದ್ರ–ಉ–ತಾ–ರ || )—

ಸ್ಫೀತಾಲೋಕಾತಿಭೂಮ್ನಾ ಪೃಥುಬಹುಭುಜಯಾ ದಿವ್ಯಮಾಲ್ಯಾಸ್ತ್ರಭಾಜಾ
ಸದ್ವಸ್ತ್ರಾಕಲ್ಪಶೋಭಾ ತ್ರಿದಶರಸಕೃತಾ ರಕ್ಷಣೌನ್ಮುಖ್ಯವತ್ಯಾ |
ಮುಕ್ತೈರುತ್ತಂಸಿತಾಂಘ್ರ್ಯಾ ಸ್ಥಿರಧೃತರಮಯಾ ಶ್ಯಾಮಯಾ ನಿತ್ಯಸತ್ಯಾ
ಶೌರೇಃ ಕಾನ್ತ್ಯಾ ಜಿತಾನಾಂ ಸ್ವಬಹುಮತಜನಸ್ವಾಮಿತಾಮನ್ವಮಂಸ್ತ ||

(ಈ ಸಪ್ತಮದಶಕದ ಸಾರಾಂಶ )

ಈ ಏಳನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಭಗವನ್ತನ ಕಲ್ಯಾಣ ಗುಣಾನುಭವದಲ್ಲಿಯೂ ದಿವ್ಯಚೇಷ್ಟಿತರಸಾನುಭವದಲ್ಲಿಯೂ ಸೌನ್ದರ್ಯಾದಿ ವಿಗ್ರಹ ವೈಲಕ್ಷಣ್ಯ ಚಿನ್ತನದಲ್ಲಿಯೂ ಮಗ್ನರಾಗಿರುವ ಭಾಗವತೋತ್ತಮರು ಯಾವ ಕುಲದವರೇ ಆದರೂ ತಮಗೆ ಪರಮಪ್ರಾಪ್ಯರೆಂದೂ, ಅವರಿಗೆ ತಾವು ಚರಮಾವಧಿ ದಾಸರೆಂದೂ ನಿರೂಪಿಸಿ ಅತ್ಯನ್ತ ಸನ್ತುಷ್ಟರಾಗಿದಾರೆ.

ಶ್ರೀಃ

# ತೃತೀಯಶತಕದಲ್ಲಿ—ಅಷ್ಟಮದಶಕ.

(ಮುಡಿಯಾನೇ—)

(ಈದಶಕದಲ್ಲಿ—ಭಗವದ್ಗುಣಾನುಭವಕ್ಕಾಗಿ ಒಂದೊಂದು ಇನ್ದ್ರಿಯವೂ ಪಕ್ಷ್ಯೇನ್ದ್ರಿಯ ಕೃತ್ಯಗಳನ್ನು ಮಾಡಲಪೇಕ್ಷಿಸುತ್ತದೆ—ಎಂದು ಹೇಳಲ್ಪಡುತ್ತದೆ.)

---

(೧) ಮುಡಿಯಾನೇ ಮೂವುಲಕುಮ್ ತೊೞುದೇತ್ತುಮ್ ಶೀರ್
ಅಡಿಯಾನೇ ಆೞ್ಕಡಲೈಕ್ಕಡೈನ್ದಾಯ್, ಪುಳ್ಳೂರ್
ಕೊಡಿಯಾನೇ, ಕೊಣ್ಡಲ್ವಣ್ಣಾ! ಅಣ್ಡತ್ತುಮ್ಬರಿಲ್
ನೆಡಿಯಾನೇ, ಎನ್ರು ಕಿಡಕ್ಕುಮೆನ್ನೆಞ್ಜಮೇ.

ಪ್ರ॥ ಮುಡಿಯಾನೇ—(ಉಭಯ ವಿಭೂತಿಗಳಿಗೂ ಸ್ವಾಮಿಯಾದವನೆಂದು ಸೂಚಿಸುವ) ಕಿರೀಟವುಳ್ಳವನೇ, ಮೂವುಲಕುಮ್-ಮೂರುಲೋಕಗಳೂ, ತೊೞುದು ಏತ್ತುಮ್-ಆಶ್ರಯಿಸಿ ಸ್ತೋತ್ರಮಾಡುವ, ಶೀರ್ಅಡಿಯಾನೇ-ಮಾಹಾತ್ಮ್ಯವುಳ್ಳ ಪಾದಗಳುಳ್ಳವನೇ, ಆೞ್ಕಡಲೈ-ಅಗಾಧವಾದ ಕ್ಷೀರಾಬ್ಧಿಯನ್ನು, ಕಡೈನ್ದಾಯ್-ಮಥನಮಾಡಿ ಅಮೃತವನ್ನು ದೇವತೆಗಳಿಗೆಕೊಟ್ಟ ಉಪಕಾರಕನೇ, ಪುಳ್ ಊರ್ ಕೊಡಿಯಾನೇ-ಗರುಡನನ್ನು ವಾಹನವಾಗಿಯೂ ಧ್ವಜವಾಗಿಯೂ ಉಳ್ಳವನೇ, ಕೊಣ್ಡಲ್ವಣ್ಣಾ – ನೀಲಮೇಘವರ್ಣನೇ, ಅಣ್ಡತ್ತು—ಪರಮಪದವಾಸಿಗಳಾದ, ಉಮ್ಬರಿಲ್-ನಿತ್ಯಸೂರಿಗಳಿಗೆ, ನೆಡಿಯಾನೇ-ಸ್ವಾಮಿಯಾದವನೇ, ಎನ್ರು-ಎಂದು ಭಾವಿಸಿ ಭಾವಿಸಿ, ಎನ್ನೆಞ್ಜಮ್-ನನ್ನ ಮನಸ್ಸು, ಕಿಡಕ್ಕುಮ್—ಪರವಶವಾಗಿ ಸುಮ್ಮನೇ ಬಿದ್ದಿದೆ (ನಿರ್ವ್ಯಾಪಾರವಾಗಿದೆ.)

( ಸಂ-ಗಾ-ರ ‖ )—

ಶ್ರೀದಿವ್ಯಮೌಳಿಧರ ! ಸೇವ್ಯ ಜಗತ್ತ್ರಯಸ್ಯ
ಸ್ತುತ್ಯಾಂಘ್ರಿಪಙ್ಕಜ! ಪಯೋನಿಧಿಮನ್ಥನೋಽಸಿ|
ತಾರ್ಕ್ಷ್ಯಧ್ವಜಾಙ್ಕಿತಪಯೋಧರವರ್ಣ ! ಚಿತ್ತಂ
ಸೂರೀನ್ದ್ರನಾಥ ! ಪರಮೇತಿ ಮಮಾಸ್ತಿ ಮುಗ್ಧಮ್ ‖

ತಾ॥ (ತಮ್ಮ ಚಿತ್ತವೃತ್ತಿಯನ್ನು ಹೇಳುತ್ತಾರೆ.) ಉಭಯವಿಭೂತಿನಾಯಕತ್ವ ಸೂಚಕವಾದ ಕಿರೀಟವನ್ನು ಧರಿಸಿರುವವನಾಗಿಯೂ, ಸರ್ವಲೋಕಸಂಸೇವ್ಯನಾಗಿಯೂ, ಸರ್ವಲೋಕಪ್ರಶಂಸಾರ್ಹಚರಣಯುಗಳನಾಗಿಯೂ, ಕ್ಷೀರಾಬ್ಧಿ ಮಥನಮಾಡಿ ಅಮೃತವನ್ನು ದೇವತೆಗಳಿಗೆಕೊಟ್ಟು ಉಪಕರಿಸಿದವನಾಗಿಯೂ, ಗರುಡವಾಹನನಾಗಿಯೂ, ನೀಲಮೇಘವರ್ಣನಾಗಿಯೂ, ನಿತ್ಯಸೂರೀಶ್ವರನಾಗಿಯೂ ಇರುವ ನನ್ನ ಸ್ವಾಮಿಯೇ—ಎಂದು ಭಾವಿಸಿ ಭಾವಿಸಿ ನನ್ನ ಮನಸ್ಸು ಪರವಶವಾಗಿ ಮೋಹಾವಿಷ್ಟವಾಗಿದೆ. (ತಮ್ಮ ಚಿತ್ತಚಾಪಲವನ್ನು ಈಪ್ರಕಾರ ಹೇಳಿರುತ್ತಾರೆ.)

(೨) ನೆಞ್ಜಮೇ ನೀಳ್ನಕರಾಕ|ವಿರುನ್ದವೆನ್
ತಞ್ಜನೇ, ತಣ್ಣಿಲಙ್ಗೈಕ್ಕಿಱೈಯೈ ಚೆಱ್ಱ
ನಞ್ಜನೇ, ಞಾಲಙ್ಕೊಳ್ವಾನ್ ಕುಱಳಾಕಿಯ
ವಞ್ಜನೇ, ಎನ್ನುಮೆಪ್ಪೋದುಮೆನ್ ವಾಶಕಮೇ.

ಪ್ರ॥ ಎನ್ವಾಶಕಮ್-ನನ್ನ ವಾಚಕವು (ನನ್ನವಾಕ್ಕು), ಎಪ್ಪೋದುಮ್-ಸರ್ವಕಾಲದಲ್ಲೂ, ನೆಞ್ಜಮೇ-ಮನಸ್ಸನ್ನೇ, ನೀಳ್ನಕರಾಕ-ಮಹಾದಿವ್ಯನಗರಿಯಾಗಿ ಮಾಡಿಕೊಂಡು, ಇರುನ್ದ-ಅದರಲ್ಲಿ ವಾಸಮಾಡಿದ, ಎನ್ತಞ್ಜನೇ-ನನಗೆ ಸಹಾಯಕನಾದ ಶರಣ್ಯನೇ, ತಣ್-ಶೀತಳವಾದ, ಇಲಙ್ಗೈಕ್ಕು-ಲಂಕಾಪುರಕ್ಕೆ, ಇಱೈಯೈ-ನಾಯಕನಾದ ರಾವಣನನ್ನು, ಚೆಱ್ಱ-ನಾಶಮಾಡಿದ, ನಞ್ಜನೇ-(ನಂಜಿನಂತೆ) ತೀವ್ರವಿಷಪ್ರಾಯನೇ, ಞಾಲಮ್ಕೊಳ್ವಾನ್-ಭೂಮಿಯನ್ನು ವಶಮಾಡಿಕೊಳ್ಳುವುದಕ್ಕೋಸ್ಕರ, ಕುಱಳಾಕಿಯ-ವಾಮನರೂಪಿಯಾದ, ವಞ್ಜನೇ - ಕೃತ್ರಿಮನೇ, ಎನ್ನುಮ್-ಎಂದು ಹೇಳುತ್ತಿರುವುದು.

( ಸ–ಗಾ–ರ ॥ )—

ಜಿಹ್ವಾ ಹಿ ವಕ್ತಿ ಮಮ ಸನ್ತತಮನ್ತರಕ್ಷೇ
ವಾಸಿನ್! ಪುರೇ ಮಮ ಶರಣ್ಯ ದಯಾಪರೇತಿ ।
ಲಙ್ಕೇಶ್ವರಪ್ರಮಥನೇತಿ ಜಗತ್ತ್ರಯಸ್ಯಾ
ಪ್ಯಾಕ್ರಾನ್ತಿಕೃತ್ಯಚಣ ! ವಞ್ಚಕ ವಾಮನೇತಿ ॥

ತಾ|| (ನನ್ನವಾಕ್ಕು ಮನೋವೃತ್ತಿಯನ್ನೂ ಸ್ವವೃತ್ತಿಯನ್ನೂ ಅಪೇಕ್ಷಿಸುತ್ತದೆಯೆಂದು ಹೇಳುತ್ತಾರೆ.) ನನ್ನ ವಾಕ್ಕು—ನನ್ನ ಮನಸ್ಸನ್ನೇ ದಿವ್ಯನಗರವಾಗಿ ಮಾಡಿಕೊಂಡು ನಿತ್ಯವಾಗಿ ವಸಿಸುತ್ತಿರುವ ನನ್ನ ಶರಣ್ಯನೇ, ಲಂಕಾಪುರೀಶ್ವರ ನಾಶಕನೇ, ವಾಮನಾವತಾರವಂ ಧರಿಸಿ ಭೂಮಿಯನ್ನು ಆಕ್ರಮಿಸಿದ ವಂಚಕನೇ—ಎಂದು ಸರ್ವಕಾಲದಲ್ಲೂ ಹೇಳುತ್ತಿರುವುದು.

(೩) ವಾಶಕಮೇ ಯೇತ್ತವರುಳ್ ಶೆಯ್ಯುಮ್, ವಾನವರ್ ತಮ್
ನಾಯಕನೇ, ನಾಳಿಳನ್ತಿಙ್ಗಳೈ ಕ್ಕೊಳ್ವಿಡುತ್ತು,
ವೇಯಕಮ್‌ಪಾಲ್ ವೆಣ್ಣೆಯ್‌ತೊಡುವುಣ್ಣ ಆನಾಯರ್
ತಾಯವನೇ, ಎನ್ರು ತಡವುಮೆನ್ ಕೈಕಳೇ.

ಪ್ರ|| ವಾಶಕಮೇ-ವಾಕ್ಕೇ, ಏತ್ತ-ಸ್ತೋತ್ರಮಾಡುವಂತೆ, ಅರುಳ್‌ಶೆಯ್ಯುಮ್-ಕೃಪೆಮಾಡುವ, ವಾನವರ್‌ತಮ್-ನಿತ್ಯಸೂರಿಗಳಿಗೆ, ನಾಯಕನೇ-ನಾಯಕನಾದವನೇ, ನಾಳ್-ಅಭಿನವನಾಗಿ ಹುಟ್ಟಿದ, ಇಳಮ್‌ತಿಙ್ಗಳೈ-(ಪೂರ್ಣ) ಬಾಲಚನ್ದ್ರನ, ಕೋಳ್-ತೇಜಸ್ಸನ್ನು, ವಿಡುತ್ತು-(ತನ್ನ ಮನ್ದಹಾಸ ಚನ್ದ್ರಿಕೆಯಿಂದ) ಪ್ರಕಾಶಪಡಿಸಿ, ವೇಯಕಮ್ ಪಾಲ್-ಬಿದುರಿನಿಂದ ಮಾಡಲ್ಪಟ್ಟ ಕುಡಿಕೆಗಳಲ್ಲಿ ಇಡಲ್ಪಟ್ಟ, ವೆಣ್ಣೆಯ್-ಬೆಣ್ಣೆಯನ್ನು, ತೊಡು ಉಣ್ಣ - ಚೌರ್ಯದಿಂದ ಭಕ್ಷಿಸಿದ, ಆನಾಯರ್ ತಾಯವನೇ-ಗೋಪಕುಲತಿಲಕನೇ, ಎನ್ರು-ಎಂದು, ಎನ್ ಕೈಕಳ್-ನನ್ನ ಹಸ್ತಗಳು, ತಡವುಮ್-(ಹಿಡಿಯುವುದಕ್ಕಾಗಿ) ಹುಡುಕುತ್ತಿರುವುವು.

( ಸ-ಗಾ-ರ || )—

**ಜಿಹ್ವಾಪ್ರಚೋದಕ! ದಯಾಪರ! ಸೂರಿಸೇವ್ಯ!**
**ನವ್ಯೇನ್ದುಭಾಸ್ವರ! ಹರೇ ನವನೀತಚೋರ |**
**ಗೋಪೇಶ್ವರೇತಿ ಸತತಂ ಚ ತವೈವ ವಿಷ್ಣೋ!**
**ಮತ್ಪಾಣಿಯುಗ್ಮಮಿಹ ಮಾರ್ಗಣಕೃತ್ಯಸಕ್ತಮ್ ||**

ತಾ|| (ನನ್ನ ಕರಯುಗಳವು ವಾಗ್ವೃತ್ತಿಯನ್ನೂ ತನ್ನ ವೃತ್ತಿಯನ್ನೂ ಅಪೇಕ್ಷಿಸುತ್ತದೆಯೆಂದು ಹೇಳುತ್ತಾರೆ.) ನನ್ನ ವಾಕ್ಕೇ ಸ್ತೋತ್ರಮಾಡುವಂತೆ ಕೃಪೆಮಾಡುವ ನಿತ್ಯಸೂರೀಶ್ವರನೇ, ಅಭಿನವಪೂರ್ಣಚನ್ದ್ರಕಿರಣವನ್ಮನ್ದಹಾಸ ಚನ್ದ್ರಿಕೋಪೇತನಾಗಿ ನವನೀತಭಕ್ಷಣವಂ ಚೌರ್ಯದಿಂದ ಮಾಡಿದ ಗೋಪಕುಲ ತಿಲಕನೇ-ಎಂದು ನನ್ನ ಕೈಗಳು ನಿನ್ನನ್ನೇ (ಹಿಡಿಯುವುದಕ್ಕಾಗಿ) ಹುಡುಕುತ್ತಿರುವುವು.

(೪) ಕೈಕಳಾಲಾರ ತೊೞುದು ತೊೞುದುನ್ನೈ,
ವೈಕಲುಮ್ ಮಾತ್ತಿರೈಪ್ಪೋದುಮೋರ್ ವೀಡಿನ್ರಿ,
ಪೈಕೊಳ್ ಪಾಮ್ಬೇಱಿ ಯುತ್ತಮಪರನೇ, ಉನ್ನೈ
ಮೆಯ್‌ಕೊಳ್ಳಕ್ಕಾಣ ವಿರುಮ್ಬುಮೆನ್ ಕಣ್‌ಕಳೇ.

ಪ್ರ॥ ಎನ್ ಕಣ್‌ಕಳ್-ನನ್ನ ಕಣ್ಣುಗಳು, ಕೈಕಳಾಲ್-ಕೈಗಳಿಂದ, ಉನ್ನೈ-ನಿನ್ನನ್ನು, ಆರ ತೊೞುದು ತೊೞುದು-ಪರಿಪೂರ್ಣವಾಗಿ ಅನೇಕಾವೃತ್ತಿ ಸೇವಿಸಿ, ವೈಕಲುಮ್ – ಸರ್ವಕಾಲದಲ್ಲೂ, ಓರ್‌ಮಾತ್ತಿರೈಪ್ಪೋದುಮ್ – ಒಂದುಕ್ಷಣ ಮಾತ್ರವೂ, ವೀಡು ಇನ್ರಿ-ಬಿಡದೆ, ಪೈಕೊಳ್ – ವಿಕಸಿತ ಫಣಗಳುಳ್ಳ, ಪಾಮ್ಬು ಏಱಿ ಉತ್ತ – ಆದಿಶೇಷನಮೇಲೆ ನಿತ್ಯವಾಸಮಾಡುವ, ಪರನೇ – ಪರಮಶೇಷಿಯಾದವನೇ, ಉನ್ನೈ-ನಿನ್ನನ್ನೇ, ಮೆಯ್‌ಕೊಳ್ಳ ಕಾಣ - ಪ್ರತ್ಯಕ್ಷವಾಗಿ ಕಾಣಬೇಕೆಂದು, ವಿರುಮ್ಬುಮ್-ಅಪೇಕ್ಷಿಸುತ್ತಿರುವುವು.

( ಸ-ಗಾ-ರ ॥ )—

ಪಾಣಿದ್ವಯೇನ ಸತತಂ ತವ ಪಾದಸೇವಾಂ
ಕೃತ್ವಾ ಕ್ಷಣಾದಪಿ ವಿಯೋಗಸಹಂ ನ ಭಾತಿ ।
ತ್ವಾಮೇವ ಶೇಷಶಯನಾನಿಶಮೀಕ್ಷಿತುಂ ಮೇ
ನೇತ್ರದ್ವಯಂ ಪರಮ ! ಕಾಂಕ್ಷತ ಏವ ಸತ್ಯಮ್ ॥

ತಾ॥ (ನನ್ನ ಕಣ್ಣುಗಳು ಕರಯುಗಳವೃತ್ತಿಯನ್ನೂ ಸ್ವವೃತ್ತಿಯನ್ನೂ ಅಪೇಕ್ಷಿಸುತ್ತವೆ—ಎಂದು ಹೇಳುತ್ತಾರೆ.) ಶೇಷಶಾಯಿಯಾದ ಪರಾತ್ಪರನೇ, ಕೈಗಳಿಂದ ನಿನ್ನನ್ನು ಪರಿಪೂರ್ಣವಾಗಿ ಅನೇಕಾವೃತ್ತಿ ಸೇವಿಸಿ, ಸರ್ವಕಾಲದಲ್ಲೂ ಕ್ಷಣಮಾತ್ರವಿಚ್ಛೇದವೂ ಇಲ್ಲದೆ—ನಿನ್ನನ್ನೇ ಪ್ರತ್ಯಕ್ಷವಾಗಿ ಕಾಣಬೇಕೆಂದು ನನ್ನ ಕಣ್ಣುಗಳು ಅಪೇಕ್ಷಿಸುತ್ತಿರುವುವು.

(೫) ಕಣ್‌ಕಳಾಲ್ ಕಾಣವರುಙ್ಕೊಲೆನ್ರಾಸೈಯಾಲ್,
ಮಣ್‌ಕೊಣ್ಡ ವಾಮನನೇಱ ಮಕಿೞ್‌ನ್ದು ಸೆಲ್,
ಪಣ್‌ಕೊಣ್ಡ ಪುಳ್ಳಿನ್ ಸಿಱಕೊಲಿ ಪಾವಿತ್ತು,
ತಿಣ್‌ಕೊಳ್ಳವೋರ್‌ಕ್ಕುಮೋ ಕಿಡನ್ದೆನ್ ಸೆವಿಕಳೇ

ಪ್ರ॥ ಕಣ್ಕಳಾಲ್-ಕಣ್ಣುಗಳಿಂದ, ಕಾಣ-ಕಾಣಬೇಕೆಂದು, ವರುಙ್ಗೊಲ್-ಬರಬಹುದೋ?, ಎನ್ರು-ಎಂದು, ಆಶೈಯಾಲ್-ಆಶೆಯಿಂದ, ಮಣ್ಕೊಣ್ಡ-ಭೂಮಿಯನ್ನು ಆಕ್ರಮಿಸಿದ, ವಾಮನನೈ-ವಾಮನಾವತಾರಮೂರ್ತಿಯನ್ನು, ಏಱ-ತನ್ನ ಮೇಲೆಹತ್ತಿಸಿಕೊಳ್ಳಲು, ಮಕಿೞ್ನ್ದು-ಸನ್ತುಷ್ಟನಾಗಿ, ಶೆಲ್-ಸಂಚರಿಸುವ, ಪುಳ್ಳಿನ್-ಗರುಡನ, ಪಣ್ಕೊಣ್ಡ - ಸಾಮಸ್ವರವುಳ್ಳ, ಶಿಱಕೊಲಿ - ರೆಕ್ಕೆಗಳ ಶಬ್ದವನ್ನು, ಭಾವಿತ್ತು-ನೆನೆದು, ಎನ್ಶೆವಿಕಳ್-ನನ್ನ ಕಿವಿಗಳು, ಕಿಡನ್ದು-ಪರವಶವಾಗಿಬಿಟ್ಟು, ತಿಣ್ಕೊಳ್ಳ-ದೃಢವಾಗಿ, ಓರ್ಕ್ಕುಮ್-ನಿರೂಪಿಸುವುವು.

( ಸ-ಗಾ-ರ ॥ )—

ದೃಷ್ಟುಂ ಚ ಲೋಚನಯುಗೇನ ಕಿಮಸ್ತಿ ಶಕ್ತಿ-
ರಿತ್ಯೇವ ವಾಮನಮಿಹಾವನಿಯಾಚಕಂ ತ್ವಾಮ್।
ಆರೋಹ್ಯ ಹೃಷ್ಟವಿನತಾಸುತಪಕ್ಷಘೋಷಂ
ಶ್ರೋತ್ರದ್ವಯಂ ಮಮ ಸದಾಽಪಿ ಚ ಕಾಂಕ್ಷತೇ ಹಿ ॥

ತಾ॥ (ನನ್ನ ಕಿವಿಗಳು ನೇತ್ರವೃತ್ತಿಯನ್ನೂ ಸ್ವವೃತ್ತಿಯನ್ನೂ ಅಪೇಕ್ಷಿಸುತ್ತವೆ - ಎಂದು ಹೇಳುತ್ತಾರೆ.) ಅವನನ್ನೇ ಕಣ್ಣುಗಳಿಂದ ಕಾಣಬೇಕೆಂಬ ಆಶೆಯಿಂದ, ವಾಮನಾವತಾರಮೂರ್ತಿಯನ್ನು ತನ್ನಮೇಲೆ ಹತ್ತಿಸಿಕೊಂಡು ಸಂಚರಿಸುವ ಗರುಡನ ಪಕ್ಷಗಳ ಘೋಷವನ್ನು ಕೇಳಲು ಆಶೆಪಟ್ಟು ನನ್ನ ಕಿವಿಗಳು ಪರವಶವಾಗಿ ಅದನ್ನೇ ನಿರೂಪಿಸುತ್ತಿರುವುವು

(೭) ಶೆವಿಕಳಾಲಾರ ನಿನ್ ಕೀರ್ತಿಕ್ಕನಿಯೆನ್ನುಮ್
ಕವಿಕಳೇ ಕಾಲಪ್ಪಣ್ದೇನುಱ್ರಪ್ಪತ್ತುೞ್ಱು,
ಪುವಿಯಿನ್ಮೇಲ್ ಪೊನ್ನೆಡುಮ್ ಶಕ್ಕರತ್ತುನ್ನೈಯೇ,
ಅವಿವಿನ್ರಿ ಯಾಡರಿಕ್ಕುಮೆನದಾವಿಯೇ.

ಪ್ರ॥ ಎನದು-ನನ್ನ, ಆವಿ-ಪ್ರಾಣವು, ನಿನ್-ನಿನ್ನ, ಕೀರ್ತಿಕ್ಕನಿ-ಕೀರ್ತಿಯ ಪಕ್ವಫಲವು, ಎನ್ನುಮ್-ಎಂದುತೋರುವ, ಕವಿಕಳೇ - ಕವಿತಾವಚನಗಳನ್ನೇ, ಕಾಲಮ್ಪಣ್-ಕಾಲಾನುರೂಪವಾದ ಗಾನವೆಂಬ, ತೇನ್-ಜೇನುತುಪ್ಪದಲ್ಲಿ, ಉಱ್ರಪ್ಪ-ಚೆನ್ನಾಗಿ ಬೆರೆಯುವಂತೆ, ತುೞ್ಱು-ಕಲಸಿ, ಶೆವಿಕಳಾಲ್-ಕಿವಿಗಳಿಂದ, ಆರ-ಚೆನ್ನಾಗಿ ಅನುಭವಿಸಲು (ಭಕ್ಷಿಸಲು), ಪುವಿಯಿನ್ಮೇಲ್-ಭೂಮಿಯಮೇಲೆ, ಪೊನ್-ದರ್ಶನೀಯವಾದ, ನೆಡು-ನಿರತಿಶಯಭೋಗ್ಯವಾದ, ಶಕ್ಕರತ್ತು-ಚಕ್ರವನ್ನು ಧರಿ

ಸಿರುವ, ಉನ್ನೈಯೇ-ನಿನ್ನನ್ನೇ, ಅವಿವು ಇನ್ರಿ-ವಿಚ್ಛೇದವಿಲ್ಲದಂತೆ, ಆದರಿಕ್ಕುಮ್-ಆದರಿಸುತ್ತಿರುವುದು.

( ಸ-ಗಾ-ರ || )—

ಶ್ರೋತ್ರೇನ್ದ್ರಿಯೇಣ ತವ ಕೀರ್ತಿಫಲಂ ಸುಪಕ್ವಂ
ದಿವ್ಯಾಮೃತಂ ಕವಿವರಾರ್ಜಿತಮೇವ ಭೋಕ್ತುಮ್ |
ತ್ವಾಮೇವ ದಿವ್ಯಕನಕೋಜ್ವಲಚಕ್ರಪಾಣಿಂ
ಪೃಥ್ವ್ಯಾಂ ಸಮಾಶ್ರಯತ ಏವ ಸದಾ ಮದಾತ್ಮಾ ||

ತಾ|| (ನನ್ನ ಪ್ರಾಣವು ನಿನ್ನ ಕೀರ್ತಿಯನ್ನು ಕಿವಿಯಿಂದ ಕೇಳಲು ಆಶೆಪಡುತ್ತಿದೆ—ಎಂದು ಹೇಳುತ್ತಾರೆ.) ನಿನ್ನ ಕೀರ್ತಿಯ ಪಕ್ವಫಲದಂತೆತೋರುವ ಕವಿತಾ ವಚನಗಳನ್ನೇ ಕಾಲಾನುಗುಣವಾದ ಗಾನವೆಂಬ ಜೇನುತುಪ್ಪದಲ್ಲಿ ಚೆನ್ನಾಗಿ ಬೆರಸಿ ನನ್ನ ಕಿವಿಗಳಿಂದ ಭಕ್ಷಿಸಬೇಕೆಂದು, ರಮಣೀಯ ಚಕ್ರಪಾಣಿಯಾದ ನಿನ್ನನ್ನೇ ನನ್ನ ಪ್ರಾಣವು ಸೇವಿಸಲು ಸನ್ನದ್ಧವಾಗಿ ಆದರಿಸುತ್ತಿರುವುದು.

(೭) ಆವಿಯೇ ಯಾರಮುದೇ ಯೆನ್ನೈ ಯಾಳುಡೈ,
ತೂವಿಯಮ್ಪುಳ್ಳುಡೈಯಾಯ್ ಶುಡರ್ನೇಮಿಯಾಯ್,
ಪಾವಿಯೇನ್ನೆಞ್ಜಮ್ ಪುಲಮ್ಬ ಪ್ಪಲಕಾಲುಮ್,
ಕೂವಿಯುಮ್ ಕಾಣಪ್ಪೆರುನುನಕೋಲಮೇ.

ಪ್ರ|| ಆವಿಯೇ-ಪ್ರಾಣರೂಪವಾಗಿಯೂ, ಆರ್-ಪರಿಪೂರ್ಣವಾದ, ಅಮುದೇ-ಅಮೃತದಂತೆ ನಿತ್ಯಭೋಗ್ಯವಾಗಿಯೂ, ಎನ್ನೈ ಆಳುಡೈ - ನನ್ನನ್ನು ದಾಸ್ಯದಲ್ಲಿ ನಿಯಮಿಸುವುದಕ್ಕೆ ತಕ್ಕ, ಅಮ್‌ತೂವಿ-ರಮ್ಯವಾದ ರೆಕ್ಕೆಗಳುಳ್ಳ, ಪುಳ್-ಗರುಡನನ್ನು, ಉಡೈಯಾಯ್-ವಾಹನವಾಗಿ ಉಳ್ಳ, ಶುಡರ್-ಉಜ್ವಲವಾದ, ನೇಮಿಯಾಯ್ - ಚಕ್ರವನ್ನು ಧರಿಸಿರುವವನೇ, ಉನಕೋಲಮ್-ನಿನ್ನ ದಿವ್ಯವಾದ ವಿಗ್ರಹ ಸೌನ್ದರ್ಯವನ್ನು, ಪಾವಿಯೇನ್- ಮಹಾಪಾಪಿಯಾದ ನನ್ನ, ನೆಞ್ಜಮ್-ಮನಸ್ಸು, ಪುಲಮ್ಬ-ಆಶೆಯೊಡನೆ ಉದ್ಘೋಷಿಸಲು, ಪಲಕಾಲಮ್-ಅನೇಕವೇಳೆಗಳಲ್ಲಿ, ಕೂವಿಯುಮ್-ನಾನು ಕೂಗಿದಾಗ್ಯೂ, ಕಾಣಪ್ಪೆರ್ರೇ-ಕಣ್ಣಿಂದ ಅನುಭವಿಸುವ ಭಾಗ್ಯವನ್ನು ಹೊಂದಲಿಲ್ಲ.

( ಸ-ಗಾ-ರ ॥ )—

ಮತ್ಪ್ರಾಣಭೂತ! ಪರಿಪೂರ್ಣರಸಾಮೃತ! ತ್ವ-
ತ್ಸೌನ್ದರ್ಯಮೇವ ಗರುಡಧ್ವಜ! ಚಕ್ರಪಾಣೇ।
ಪಾಪೀ ಸ್ವಮಾನಸಮನೋರಥವಾಕ್ಯಘೋಷೈ-
ರುದ್ಘೋಷಯನ್ನಪಿ ನ ದೃಷ್ಟಿವಶಂ ಭಜೇಽತ್ರ ॥

ತಾ॥ (ಕರಣಗಳ ಆಶೆಯನ್ನೆಲ್ಲಾ ಹೇಳಿದ ಅನನ್ತರ ತಮ್ಮ ಮನೋರಥವನ್ನೇ ಸಾಕ್ಷಾತ್ತಾಗಿ ಹೇಳುತ್ತಾರೆ.) ನನಗೆ ಪ್ರಾಣರೂಪವಾಗಿಯೂ, ಪೂರ್ಣಾಮೃತರೂಪವಾಗಿಯೂ, ಗರುಡವಾಹನನಾಗಿಯೂ, ಉಜ್ಜ್ವಲಚಕ್ರಧಾರಿಯಾಗಿಯೂ ಇರುವ ನಿನ್ನ ದಿವ್ಯಮಂಗಳವಿಗ್ರಹದ ಸೌನ್ದರ್ಯವನ್ನು ಪಾಪಿಯಾದ ನನ್ನ ಮನಸ್ಸು ಆಶೆಯೊಡನೆ ಉದ್ಘೋಷಿಸಲು, ಆ ಆಶೆಯಿಂದ ನಾನು ಅನೇಕಾವೃತ್ತಿ ಕೂಗಿದಾಗ್ಯೂ ನಿನ್ನನ್ನು ಕಂಡು ಅನುಭವಿಸುವ ಭಾಗ್ಯವನ್ನು ಹೊಂದಲಿಲ್ಲ.

(೮) ಕೋಲಮೇ ತಾಮರೈಕ್ಕಣ್ಣದೋರಞ್ಜನ
ನೀಲಮೇ, ನಿನ್ರೆನದಾವಿಯೈ ಯೀರ್ಕಿನ್ರ
ಶೀಲಮೇ, ಶೆನ್ರು ಶೆಲ್ಲಾದನ ಮುನ್ನಿಲಾಮ್
ಕಾಲಮೇ, ಉನ್ನೈ ಯೆನ್ನಾಳ್ ಕಣ್ಡುಕೊಳ್ವನೇ.

ಪ್ರ॥ ಕೋಲಮೇ-ದರ್ಶನೀಯನಾಗಿಯೂ, ತಾಮರೈಕಣ್ಣದು-ತಾವರೆಯಂತೆ ಕಣ್ಣುಗಳುಳ್ಳವನಾಗಿಯೂ ಇರುವ, ಓರ್-ಅದ್ವಿತೀಯವಾದ, ಅಞ್ಜನನೀಲಮೇ-ಅಂಜನದಂತೆ ಇರುವ ನೀಲವರ್ಣಮೂರ್ತಿಯೇ, ನಿನ್ರು-ಸ್ಥಿರವಾಗಿನಿಂತು, ಎನದು ಆವಿಯೈ-ನನ್ನ ಆತ್ಮವಸ್ತುವನ್ನು, ಈರ್ಕಿನ್ರ-ಸೀಳುತ್ತಿರುವ, ಶೀಲಮೇ-ದಿವ್ಯಶೀಲಮೂರ್ತಿಯೇ, ಶೆನ್ರು-ಭೂತಕಾಲವೂ, ಶೆಲ್ಲಾದನ-ಭವಿಷ್ಯತ್ಕಾಲವೂ, ಮುನ್ನಿಲಾಮ್ ಕಾಲಮೇ-ವರ್ತಮಾನಕಾಲವೂ ನಿನಗೆ ವಶವಾಗಿರುವಂತೆ ಕಾಲಸ್ವರೂಪಿಯಾದವನೇ, ಉನ್ನೈ-ಇಂತಹ ನಿನ್ನನ್ನು, ಎನ್ನಾಳ್-ಯಾವಾಗ, ಕಣ್ಡುಕೊಳ್ವನ್-ನಾನು ಕಂಡು ಅನುಭವಿಸುವೆನು ?

( ಸ-ಗಾ-ರ || )—

ಸೌನ್ದರ್ಯವಿಗ್ರಹ! ಸರೋರುಹನೇತ್ರಯುಗ್ಮ !
ನೀಲಾಞ್ಜನಾಭ ! ಮಮ ಭಞ್ಜಕಶೀಲಮೂರ್ತೇ |
ಭೂತಂ ಭವಿಷ್ಯಮಪಿ ಚಾದ್ಯತನಂ ಭವನ್ತಂ
ಪಶ್ಯಾಮಿ ಕುತ್ರ ಚ ಕದೇತಿ ವಿಚಿನ್ತಯಾಮಿ ||

ತಾ|| (ತಕ್ಕ ಕಾಲದಲ್ಲಿ ನಿಮ್ಮ ಆಶೆಯು ತೀರುವುದೆಂದು ಭಗವನ್ತನು ಹೇಳಲು, ಆಕಾಲತತ್ತ್ವವೂ ನಿನಗೆ ಅಧೀನವೆಂದು ಹೇಳುತ್ತಾರೆ.) ದರ್ಶನೀಯನಾಗಿಯೂ, ಪುಂಡರೀಕಾಕ್ಷನಾಗಿಯೂ, ಅಂಜನ ನೀಲವರ್ಣನಾಗಿಯೂ ನಿಂತು ನನ್ನ ಆತ್ಮವಸ್ತುವನ್ನು ಭೇದಿಸುತ್ತಿರುವ ದಿವ್ಯಶೀಲಮೂರ್ತಿಯೇ! ಭೂತಭವಿಷ್ಯದ್ವರ್ತಮಾನಕಾಲಗಳೆಲ್ಲಾ ನಿನಗೆ ವಶವಾಗಿರುವಂತೆ ನೀನೇ ಕಾಲಸ್ವರೂಪಿಯಾಗಿರುವುದರಿಂದ ನಿನ್ನನ್ನು ಯಾವಾಗ ನಾನು ಕಣ್ಡು ಅನುಭವಿಸುವೆನು ?

(೯) ಕೊಳ್ವನಾನ್ಮಾವಲಿ ಮೂವಡಿ ತಾವೆನ್ರು
ಕಳ್ವನೇ, ಕಞ್ಜನೈ ವಞ್ಜಿತ್ತು ವಾಣನೈ
ಉಳ್ವನ್ಮತ್ತಿ ಶೀರ, ಓರಾಯಿರಮ್ ತೋಳ್ತುಣಿತ್ತ
ಪುಳ್ವಲ್ಲಾಯ್ ಉನ್ನೈ ಯೆಞ್ಞಾನ್ರು ಪೊರುನ್ದುವನೇ.

ಪ್ರ|| ಮಾವಲಿ-ಮಹಾಬಲಿಯೇ, ನಾನ್-ನಾನು, ಮೂವಡಿಕೊಳ್ವನ್-ಮೂರು ಅಡಿ (ಭೂಮಿಯನ್ನು) ಯಾಚಿಸುವವನು, ತಾ-ಕೊಡು ಎನ್ರು-ಎಂದು ಮುಗ್ಧವಚನದಿಂದ ವಶೀಕರಿಸಿದ, ಕಳ್ವನೇ-ವಂಚಕನೇ, ಕಞ್ಜನೈವಞ್ಜಿತ್ತು-(ವಂಚಕನಾದ) ಕಂಸನನ್ನು ವಂಚಿಸಿ, ವಾಣನೈ-ಬಾಣಾಸುರನನ್ನು, ಉಳ್ವನ್ಮೈತೀರ-ಹೃದಯದಾರ್ಢ್ಯವು ನಶಿಸುವಂತೆ, ಓರ್ ತೋಳ್ ಆಯಿರಮ್-ಅದ್ವಿತೀಯವಾದ ಸಹಸ್ರಬಾಹುಗಳನ್ನೂ, ತುಣಿತ್ತ-ಕತ್ತರಿಸಿಹಾಕಿದ, ಪುಳ್ವಲ್ಲಾಯ್-ಗರುಡವಾಹನನೇ, ಉನ್ನೈ-ನಿನ್ನನ್ನು, ಎಞ್ಞಾನ್ರು-ಎಂದಿಗೆ, ಪೊರುನ್ದುವನ್-ಸೇರುವೆನು ?

( ಸ-ಗಾ-ರ || )—

ಯಾಚೇ ಪದತ್ರಯತಲಂ ಹಿ ಮಹಾಬಲೇ! ತ್ವಂ
ದೇಹೀತಿ ವಞ್ಚಕ! ವಟೋ! ಖಲಕಂಸನಾಶಿನ್ |
ಬಾಣಾಸುರಸ್ಯ ದೃಢಬಾಹುಸಹಸ್ರಭೇದಿನ್ !
ಪ್ರಾಪ್ಸ್ಯೇ ಕದಾ ಗರುಡವಾಹನ! ಮಾಧವ! ತ್ವಾಮ್ ? ||

ತಾ|| (ಸರ್ವವಿರೋಧಿ ನಿರಸನಶೀಲನಾದ ನಿನ್ನನ್ನು ನಾನು ಎಂದಿಗೆ ಸೇರುವೆನೆಂದು ಹೇಳುತ್ತಾರೆ) ''ಮಹಾಬಲಿಯೇ! ನಾನು ಮೂರಡಿ ಭೂಮಿಯನ್ನು ಯಾಚಿಸುತ್ತೇನೆ, ಕೊಡು''—ಎಂದು ಮುಗ್ಧವಚನದಿಂದ ಅವನನ್ನು ಮೋಹಪಡಿಸಿದ ವಂಚಕನೇ? ವಂಚಕನಾದ ಕಂಸನನ್ನು ವಂಚಿಸಿ, ಬಾಣಾಸುರನ ಸಹಸ್ರ ಬಾಹುಗಳನ್ನೂ ಕತ್ತರಿಸಿಹಾಕಿದ ಗರುಡವಾಹನನೇ! ನಿನ್ನನ್ನು ಎಂದಿಗೆ ನಾನು ಸೇರುವೆನು?

(೧೦) ಪೊರುನ್ದಿಯ ಮಾಮರುದಿನಿಡೈಪೋಯ ಎಮ್
ಪೆರುನ್ತಕಾಯ್, ಉನ್‌ಕ್ಕೞಲ್ ಕಾಣಿಯ ಪೇದುಱ್ಱು,
ವರುನ್ದಿ ನಾನ್ ವಾಶಕಮಾಲೈಕೊಣ್ಡು, ಉನ್ನೈಯೇ
ಇರುನ್ದಿರುನ್ದೆತ್ತನೈಕಾಲಮ್ ಪುಲಮ್ಬುವನೇ.

ಪ್ರ|| ಪೊರುನ್ದಿಯ-ಸೇರಿನಿಂತಿರುವ, ಮಾಮರುದಿನ್ ಇಡೈ-ಮಹಾ ಯಮಳ ವೃಕ್ಷಗಳನಡುವೆ, ಪೋಯ-ಪ್ರವೇಶಿಸಿ ಅವುಗಳನ್ನು ಮುರಿದುಹಾಕಿದ, ಎಮ್-ನಮ್ಮ, ಪೆರುನ್ತಕಾಯ್-ಮಹಾಸ್ವಾಮಿಯಾದವನೇ, ಉನ್-ನಿನ್ನ, ಕೞಲ್-ಪಾದಗಳನ್ನು, ಕಾಣಿಯ-ಕಾಣಬೇಕೆಂಬ, ಪೇದು-ಆಶೆಯನ್ನು, ಉಱ್ಱು-ಉಳ್ಳವನಾಗಿ, ವರುನ್ದಿ-ಕ್ಲೇಶಪಟ್ಟು, ನಾನ್-ನಾನು, ವಾಶಕಮ್-(ನಿನ್ನ) ಗುಣಕೀರ್ತನರೂಪವಾದ, ಮಾಲೈಕೊಣ್ಡು - ಶಬ್ದಮಾಲೆಗಳನ್ನು ತಂದು, ಉನ್ನೈಯೇ - ನಿನ್ನನ್ನೇ (ಆಶಿಪಟ್ಟು), ಇರುನ್ದು ಇರುನ್ದು-(ಹೀಗೆ) ಬಿದ್ದು ಇದ್ದು, ಎತ್ತನೈಕಾಲಮ್-ಎಷ್ಟು ಕಾಲದವರೆಗೆ, ಪುಲಮ್ಬುವನ್-ಕೂಗುತ್ತಿರುವೆನು?

( ಸ-ಗಾ-ರ || )—

ಸಂವೃದ್ಧಪೀನಯಮಳಾರ್ಜುನಭಞ್ಜಕ! ತ್ವಂ
ನಾಥೋಽಸಿ ಮೇ! ಪದಯುಗಂ ನನು ತೇ ದಿದೃಕ್ಷುಃ |
ಖಿನ್ನೋಽಹಮಚ್ಯುತ! ತವ ಸ್ತುತಿಮಾಲಿಕಾನ್ತು
ಪ್ರಾಪ್ಯೋತ್ಸುಕೋಽಸ್ಮಿ ಸಮಯಂ ಚ ಕಿಯನ್ತಮೇವಮ್? ||

ತಾ|| (ಹೀಗೆ ಕ್ರನ್ದನಮಾಡುವ ನಾನು ಇನ್ನೂ ಎಷ್ಟುಕಾಲ ಕೂಗುತ್ತಿರಬೇಕು?—ಎಂದು ಹೇಳುತ್ತಾರೆ.) ಯಮಳಾರ್ಜುನ ವೃಕ್ಷಭಂಜಕನಾದ ನಮ್ಮ ಮಹಾಸ್ವಾಮಿಯೇ! ನಿನ್ನ ಪಾದಗಳನ್ನು ಕಾಣಬೇಕೆಂಬ ಆಶೆಯಿಂದ ಕ್ಲೇಶಪಡುತ್ತ, ನಾನು ನಿನ್ನ ಗುಣಕೀರ್ತನ ರೂಪವಾದ ಶಬ್ದಮಾಲೆಗಳನ್ನು ತಂದು, ನಿನ್ನನ್ನೇ ಆಶಿಪಡುತ್ತಿದ್ದು ಹೀಗೆ ಎಷ್ಟುಕಾಲದವರೆಗೆ ಕೂಗುತ್ತಿರಬೇಕು?

(೧೧) ಪುಲಮ್ಬು ಶೀರ್ ಪ್ಪೂಮಿಯಳನ್ದ ಪೆರುಮಾನ್ನೈ,
ನಲಙ್ಕೊಳ್ ಶೀರ್ ನಲ್ ಕುರುಕೂರ್ ಚ್ಚಡಕೋಪನ್, ಶೊಲ್
ವಲಙ್ಕೊಣ್ಡ ವಾಯಿರತ್ತುಳ್ಳಿವೈಯುಮೋರ್ ಪತ್ತು
ಇಲಙ್ಗುವಾನ್, ಯಾವರುಮೇಱುವರ್ ಶೊನ್ನಾಲೇ.

ಪ್ರ॥ ಪುಲಮ್ಬುಶೀರ್–ಶ್ಲಾಘನೀಯವಾದ ಗುಣಗಳುಳ್ಳವನಾಗಿ, ಪೂಮಿ–ಭೂಮಿಯನ್ನು, ಅಳನ್ದ–ಅಳೆದ, ಪೆರುಮಾನ್ನೈ–ಸರ್ವೇಶ್ವರನನ್ನು, ನಲಮ್ ಕೊಳ್–(ಪ್ರೀತಿವಿಶೇಷವೆಂಬ) ಮಾಹಾತ್ಮ್ಯವುಳ್ಳ, ಶೀರ್ – ಜ್ಞಾನಾದಿಗುಣವಿಶಿಷ್ಟರಾದ, ನಲ್ ಕುರುಕೂರ್ ಶಡಕೋಪನ್–ದಿವ್ಯಕುರುಕಾಪುರಾಧೀಶರಾದ ನಮ್ಮಾೞ್ವಾರು, ಶೊಲ್ – ಹೇಳಿದ (ರಚಿಸಿದ), ವಲಮ್ ಕೊಣ್ಡ – ಅರ್ಥಪ್ರತಿಪಾದನ ಬಲವುಳ್ಳ, ಆಯಿರತ್ತುಳ್ – ಸಹಸ್ರಪದ್ಯಮಾಲೆಯೊಳು, ಓರ್–ಅದ್ವಿತೀಯವಾದ, ಇವೈ ಪತ್ತುಮ್–ಈ ದಶಕವನ್ನು, ಶೊನ್ನಾಲ್ – ಪಠನಮಾಡಿದರೆ, ಯಾವರುಮ್–ಎಲ್ಲರೂ, ಇಲಙ್ಗುವಾನ್ – ಅತ್ಯುಜ್ಜ್ವಲವಾದ ಪರಮಪದದಲ್ಲಿ, ಏಱುವರ್–ಹತ್ತಿ ಸೇರುವ ಭಾಗ್ಯವುಳ್ಳವರು.

( ಸ–ಗಾ–ರ ॥ )—

ಸ್ತವ್ಯಂ ತ್ರಿವಿಕ್ರಮಮುದಾರಗುಣಂ ಮಹಾತ್ಮಾ
ಸ್ತೋತುಂ ಮುನಿಸ್ತು ಕುರುಕಾಧಿಪತಿಶ್ಶಠಾರಿಃ ।
ಸಾಹಸ್ರಮಾಹ ಪರಮಂ ದಶಕಂ ತದೇತ–
ದ್ಧನ್ಯಾಃ ಪಠನ್ತಿ ಯದಿ ಯಾನ್ತಿ ಪರಂ ಪದಂ ತತ್ ॥

ತಾ॥ (ಈ ದಶಕದ ಪಠನಫಲವನ್ನು ಹೇಳುತ್ತಾರೆ.) ಶ್ಲಾಘ್ಯಗುಣ ವಿಶಿಷ್ಟನಾದ (ಭೂಮಿಯನ್ನು ಅಳೆದ) ವಾಮನಾವತಾರಮೂರ್ತಿಯನ್ನು ಉತ್ಕಟಪ್ರೀತಿಯಿಂದ ಜ್ಞಾನಾದಿಗುಣವಿಶಿಷ್ಟರಾದ ಶ್ರೀ ಶಠಾರಿಮುನಿವರ್ಯರು ಸ್ತೋತ್ರಮಾಡಲು ರಚಿಸಿದ ಸಹಸ್ರ ಪದ್ಯಮಾಲೆಯೊಳು ಅದ್ವಿತೀಯವಾದ ಈ ದಶಕವನ್ನು ಪಠನ ಮಾಡುವವರೆಲ್ಲರೂ ಪರಮಪದಕ್ಕೆ ಹತ್ತಿಹೋಗಿ ಅಲ್ಲಿ ನಿತ್ಯವಾಸಮಾಡುವರು.

( ದ್ರ–ಉ–ಸಂ ॥ )—

(ಸಂಗತಿಶ್ಲೋಕವು ಈ ದಶಕಕ್ಕೆ ಸಿಕ್ಕಲಿಲ್ಲ.)

ಅತ್ಯುತ್ಕಟೈರಿಹ ಮನೋರಥಜಾಲಪೂರೈ-
ರ್ನೀತೋ ಮುನಿರ್ಭಗವತಾ ಸಹ ಸಙ್ಗಕಾಮಃ ।
ಸರ್ವೇನ್ದ್ರಿಯೈರಪಿ ಚ ಕಿಙ್ಕರಭಾವಸಕ್ತಃ
ಶ್ರೀಕಾನ್ತಮೇವ ಸುಗುಣಾಮ್ಬುಧಿಮಾಪ್ತುಮೈಚ್ಛತ್ ॥

(ಈ ಶ್ಲೋಕವು ಶ್ರೀಕಲ್ಕಿಸಿಂಹ ಭಗವದ್ವಿರಚಿತವಾದುದು.)

( ದ್ರ–ಉ–ತಾ–ರ ॥ )—

ಚಿತ್ತಾಕೃಷ್ಟಿಪ್ರವೀಣೈರಭಿಲಷನಸುಖೈಸ್ಸ್ಪರ್ಶವಾಞ್ಛಾಂ ದುಹಾನೈ
ರಾತನ್ವಾನೈರ್ದಿದೃಕ್ಷಾಂ ಶ್ರುತಿಹಿತಸಹಿತೈರಾತ್ಮನಿತ್ಯಾದರಾರ್ಹೈಃ ।
ಘ್ರೋಣಾಕ್ರೋಶಕೃದ್ಭಿಸ್ಸ್ಮರದರತಿಕರೈರ್ದತ್ತಸಾಯುಜ್ಯಸಙ್ಗೈಃ
ಶೌರ್ಣೈರ್ಬಾಲಲೌಲ್ಯಂ ಮಿಳಿತಗುಣಗಣೈರ್ನಿತ್ಯದೃಕ್ಯಾಙ್ಗಮಾಹ ॥

(ಈ ಅಷ್ಟಮದಶಕದ ಸಾರಾಂಶ—)

ಈ ಎಂಟನೆಯ ದಶಕದಲ್ಲಿ ಶ್ರೀ ಶಠಾರಿಮುನಿವರ್ಯರು—ಭಗವನ್ತನ ಗುಣಾನುಭವಕ್ಕಾಗಿ ತಮ್ಮ ಮನೋವಾಕ್ಪಾಣಿನೇತ್ರಶ್ರೋತ್ರಪ್ರಾಣಗಳು ಉತ್ಕಟಪ್ರೀತಿಯಿಂದ ಸ್ವಸ್ವೇತರವೃತ್ತಿಗಳನ್ನು ಅಪೇಕ್ಷಿಸಿದ ಪ್ರಕಾರಗಳನ್ನು ವರ್ಣಿಸಿ, ತಮ್ಮ ಮನೋರಥ ಸಾಫಲ್ಯಕಾಲವನ್ನೂ ನಿರೀಕ್ಷಿಸುತ್ತ ಕ್ರನ್ದನಮಾಡಿರುತ್ತಾರೆ.



ಶ್ರೀಃ

# ತೃತೀಯಶತಕದಲ್ಲಿ—ನವಮದಶಕ.

## (ಶೊನ್ನಾಲ್‌ವಿರೋದವಿದು—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಕವಿವರ್ಯರಾದ ಲೌಕಿಕರನ್ನು ಕುರಿತು—ಶ್ರಿಯಃಪತಿಯಾದ ಭಗವಂತನ ಸ್ತೋತ್ರವೇ ಸಾರ್ಥಕವೆಂದೂ, ಇತರರ ಸ್ತೋತ್ರವು ನಿರರ್ಥಕವೆಂದೂ—ಉಪದೇಶಿಸುತ್ತಾರೆ.)

---

(೧) ಶೊನ್ನಾಲ್ ವಿರೋದವಿದಾಕಿಲುಮ್ ಶೊಲ್ಲುವನ್ ಕೇಣ್ಮಿನೋ,
ಎನ್ನಾವಿಲ್ ಇನ್‌ಕವಿ ಯಾನೊರುವರ್‌ಕ್ಕುಮ್ ಕೊಡುಕ್ಕಿಲೇನ್,
ತೆನ್ನಾತೆನಾವೆನ್ರು ವಣ್ಡುಮುರಲ್ ತಿರುವೇಙ್ಗಡತ್ತು,
ಎನ್ನಾನೈ ಯೆನ್ನಪ್ಪನೆಮ್ಬೆರುಮಾನುಳನಾಕವೇ.

ಪ್ರ॥ ಇದು–(ಇತರರನ್ನು ಸ್ತೋತ್ರಮಾಡಕೂಡದೆಂಬ) ಈ ಹಿತೋಕ್ತಿಯು, ಶೊನ್ನಾಲ್–ಹೇಳಿದರೆ, ವಿರೋದಮ್–(ನಿಮ್ಮ ಅಭಿಮತಕ್ಕೆ) ವಿರುದ್ಧವಾದುದು. ಆಕಿಲುಮ್–ಆದಾಗ್ಯೂ, ಶೊಲ್ಲುವನ್–ಹೇಳುವೆನು. ಕೇಣ್ಮಿನೋ–ಕೇಳಿರಿ; ವಣ್ಡು–ಭ್ರಮರಗಳು, ತೆನ್ನಾತೆನಾವೆನ್ರು – ತೆನ್ನಾತೆನಾವೆಂದು (ಮಧುಪಾನದಿಂದ) ಗಾನವನ್ನು, ಮುರಲ್–ಶಬ್ದಮಾಡುವ, ತಿರುವೇಙ್ಗಡತ್ತು–ತಿರುಪತಿ ವೇಂಕಟಾದ್ರಿಯಲ್ಲಿ ಸನ್ನಿಹಿತನಾಗಿರುವ, ಎನ್ ಆನೈ–ನನಗೆ (ಆನೆಯಂತೆ) ಸ್ತೋತ್ರಾರ್ಹನಾಗಿರುವ, ಎನ್ ಅಪ್ಪನ್–ನನ್ನ (ಕವಿತ್ವ ಪ್ರೋತ್ಸಾಹಕನಾದ) ಉಪಕಾರಕನಾಗಿರುವ, ಎಮ್ಬೆರುಮಾನ್–ನನ್ನ ಸ್ವಾಮಿಯು, ಉಳನಾಕ–ತಾನು (ಈ ಕವಿತ್ವದಿಂದ) ಸತ್ತೆಯಂ ಪಡೆದು ಇರುವಲ್ಲಿ, ಎನ್ ನಾವಿಲ್–ನನ್ನ ನಾಲಿಗೆಯಲ್ಲಿ ಉದ್ಭವಿಸುವ, ಇನ್‌ಕವಿ–ಮಧುರವಾದ ಕವಿತ್ವವನ್ನು, ಯಾನ್–ನಾನು, ಒರುವರ್‌ಕ್ಕುಮ್–ಮತ್ತೊಬ್ಬರಿಗೂ, ಕೊಡುಕ್ಕಿಲೇನ್–ಕೊಡಲಾರೆನು.

( ಸ–ಗಾ–೮ || )—

ಉಕ್ತಂ ಚೇತ್ತದಿದಂ ವಿರುದ್ಧಮಿಹ ವಸ್ಸತ್ಯಂ ತಥಾಽಪ್ಯುಚ್ಯತೇ
ಯೂಯಂ ಸಂಶೃಣುತಾದ್ಯ ಭೃಙ್ಗವಿಹೃತೇರ್ಝಂಕಾರಶಬ್ದಾನ್ವಿತೇ |
ಶೇಷಾದ್ರೌ ಮಮ ಲಾಲನೀಯವಿಷಯಸ್ಸ್ವಾಮೀ ಮಮ ಸ್ತುತ್ಯತಾಂ
ಪ್ರಾಪ್ಯಾಽಽಸ್ತೇ! ರಸನಾಭಿರಾಮಕವಿತಾಂ ದದ್ಯಾಂ ನ ಮೇಽನ್ಯೇಷ್ವಹಮ್||

ತಾ|| (ಶ್ರೀ ವೇಂಕಟಾದ್ರೀಶ್ವರನನ್ನು ಹೊರತು ಮಿಕ್ಕ ಯಾರನ್ನೂ ನಾನು ಸ್ತೋತ್ರಮಾಡಲಾರೆನೆಂದು ತಮ್ಮ ಕವಿತಾಸ್ವಾರಸ್ಯವನ್ನು ಶ್ಲಾಘಿಸುತ್ತಾರೆ.) ನಾನು ಯಥಾರ್ಥವನ್ನು ಹೇಳಿದರೆ (ಹಿತೋಕ್ತಿಯನ್ನು ಹೇಳಿದರೆ) ನಿಮಗೆ ವಿರೋಧವಾಗಿ ತೋರುವುದು; ಆದರೂ ಹೇಳುವೆನು—ಕೇಳಿರಿ. ಮಧುಪಾನ ಮತ್ತವಾದ ಭ್ರಮರಗಳ ಗಾನದಿಂದಕೂಡಿದ ಶ್ರೀ ವೇಂಕಟಾದ್ರಿಯಲ್ಲಿ ನಿಂತು ನನಗೆ ಸ್ತೋತ್ರಾರ್ಹನಾಗಿರುವ ನನ್ನ ಸ್ವಾಮಿಯನ್ನು ನನ್ನ ಕವಿತೆಗೆ ವಿಷಯವಾಗಿ ನಾನು ಪಡೆದಿರುವಲ್ಲಿ, ನನ್ನ ನಾಲಿಗೆಯಲ್ಲಿ ಉದ್ಭವಿಸುವ ದಿವ್ಯ (ಮಧುರ) ಕವಿತ್ವವನ್ನು ನಾನು ಇತರವಿಷಯಗಳಲ್ಲಿ ವಿನಿಯೋಗಿಸಲಾರೆನು.

(೨) ಉಳನಾಕವೇಯೆಣ್ಣಿ ತ್ತನ್ನೈ ಯೊನ್ರಾಕ ತ್ತನ್ ಶೆಲ್ವತ್ತೈ,
ವಳನಾಮದಿಕ್ಕುಮಿಮ್ಮಾನಿಡತ್ತೈ ಕ್ಕವಿಪಾಡಿಯೆನ್,
ಕುಳನಾರ್ ಕ್ಕೞನಿಶೂೞ್ ಕಣ್ಣನ್ ಕುಱುಙ್ಗುಡಿ
ಮೆಯ್ಮ್ಮೈಯೋ,
ಉಳನಾಯ ವೆನ್ದೈಯೈ ಯೆನ್ದೈಪೆಮ್ಮಾನೈ
ಯೊೞಿಯವೇ.

ಪ್ರ|| ಕುಳಮ್ ಆರ್-ಜಲಭೂಮಿಗಳಿಂದ ಪೂರ್ಣವಾದ, ಕೞನಿಶೂೞ್-ಕ್ಷೇತ್ರಗಳಿಂದ ಪರಿವೃತವಾದ, ಕಣ್-ಪ್ರದೇಶವುಳ್ಳ, ನಲ್-ರಮಣೀಯವಾದ (ಪವಿತ್ರವಾದ), ಕುಱುಙ್ಗುಡಿಯೇ-ತಿರುಕ್ಕುಱುಙ್ಗುಡಿಯೆಂಬ ದಿವ್ಯಕ್ಷೇತ್ರದಲ್ಲಿ, ಮೆಯ್ ಮ್ಮೈ-(ಸೌಲಭ್ಯಾದಿಗುಣಗಳಿಂದ) ಸತ್ಯಸ್ವರೂಪನಾಗಿ, ಉಳ ಆಯ-ನಿತ್ಯವಾಸ ಮಾಡುವ, ಎನ್ದೈಯೈ-ನನಗೆ ಉಪಕಾರಕನಾದ, ಎನ್ದೈಪೆಮ್ಮಾನೈ-ನನ್ನ ಕುಲನಾಥನನ್ನು, ಒೞಿಯ-ಹೊರತು, ತನ್ನೈ-(ಭಗವಜ್ಜ್ಞಾನವಿಲ್ಲದೆ ಅಸತ್ಕಲ್ಪನಾದ) ತನ್ನನ್ನೇ, ಉಳನಾಕವೇ-ಸತ್ತೆಯುಳ್ಳವನೆಂದು, ಒನ್ರಾಕ-ಒಂದು ವಸ್ತುವೆಂದು,

ಎಣ್ಣಿ-ಭಾವಿಸಿ, ತಶೆಲ್ವತ್ತೈ-ತನ್ನ ಕ್ಷುದ್ರವಾದ ಧನವನ್ನು, ವಳನಾ-ಅತ್ಯಂತ ಶ್ಲಾಘನೀಯವೆಂದು, ಮದಿಕ್ಕುಮ್-ತಾನೇ ಅಭಿಮಾನಿಸಿರುವ, ಇಮ್ಮಾನಿಡತ್ತೈ-ಈ ಮಾನುಷಜಾತಿಯನ್ನು, ಕವಿಪಾಡಿ ಎ-ಸ್ತೋತ್ರಮಾಡಿ ಏನುಫಲ ?

( ಸ-ಗಾ-ರ ‖ )

ಕಿಂ ವಾ ಸ್ಯಾತ್ಫಲಮತ್ರ ಮಾನುಷತತೇಸ್ತೋತ್ರೇಣ ಯಾ ಭೂತಲೇ
ಸತ್ತಾಂ ಸ್ವಾಮಭಿನನ್ದ್ಯ ಫಲ್ಗುಧನಮಪ್ಯಾಸ್ತೇ ಚ ಮತ್ತಾ ವೃಥಾ ।
ತೀರ್ಥೈಸ್ಸಸ್ಯಸಮೃದ್ಧಿಭಿಃ ಪರಿವೃತೇ ರಮ್ಯೇ ಕುರುಙ್ಗಾಪುರೇ
ಭಾಸ್ವನ್ತಂ ಕುಲನಾಯಕಂ ಮಮ ವಿಭುಂ ಸರ್ವೇಶ್ವರಂ ತಂ ವಿನಾ ‖

ತಾ‖ (ಕ್ಷುದ್ರಧನಿಕರನ್ನು ಶ್ಲಾಘಿಸಿ ಏನುಫಲವೆಂದು ಹೇಳುತ್ತಾರೆ.) ಜಲಭೂಮಿಗಳಿಂದಲೂ ಸಸ್ಯಕ್ಷೇತ್ರಗಳಿಂದಲೂ ಕೂಡಿ ರಮಣೀಯವಾದ ತಿರುಕುರುಙ್ಗುಡಿಯಲ್ಲಿ ಸತ್ಯಸ್ವರೂಪನಾಗಿ ನಿತ್ಯವಾಸಮಾಡುವ ನನ್ನ ಕುಲನಾಥನನ್ನು ಹೊರತು—ಅಸತ್ಕಲ್ಪನಾಗಿ ಕ್ಷುದ್ರೈಶ್ವರ್ಯದಿಂದ ಮತ್ತನಾದ ಮಾನುಷನನ್ನು ಸ್ತೋತ್ರಮಾಡಿದುದರಿಂದ ಏನುಫಲವುಂಟಾದೀತು ?

(೩) ಒಳಿವೊನ್ರಿಲ್ಲಾದ ಪಲ್ಲೂೞಿತೋಱೂೞಿ ನಿಲಾವ ಪ್ಪೋಮ್
ವೞಿಯೈ ತ್ತರುಮ್, ನಙ್ಗಳ್ ವಾನವರೀಶನೈ ನಿಱ್ಕ
ಪ್ಪೋಯ್,
ಕೞಿಯ ಮಿಕನಲ್ಲ ವಾನ್ಕವಿಕೊಣ್ಡು ಪುಲವೀರ್ಕಾಳ್,
ಇೞಿಯಕ್ಕರುದಿ ಯೋರ್ ಮಾನಿಡಮ್ ಪಾಡಲೆನ್ನಾವದೇ.

ಪ್ರ‖ ಒನ್ರು ಒೞಿವು ಇಲ್ಲಾದ-ಒಂದುವಿಚ್ಛೇದವೂ ಇಲ್ಲದ, ಪಲ್ ಊೞಿ ತೋಱೂೞಿ – ಯಾವದಾತ್ಮಭಾವಿಯಾದ ಕಾಲದಲ್ಲೆಲ್ಲಾ (ಅನೇಕ ಕಲ್ಪಗಳಲ್ಲೆಲ್ಲಾ), ನಿಲಾವ-ನಿಂತು ಸ್ಥಿರವಾಗಿ ಅನುಭವಿಸುವಂತೆ, ಪೋಮ್-ನಡೆಯಬೇಕಾದ, ವೞಿಯೈ-ಕೈಂಕರ್ಯಮಾರ್ಗವನ್ನು, ತರುಮ್-ನಮಗೆ ಉಂಟುಮಾಡುವ, ನಙ್ಗಳ್ ವಾನವರೀಶನೈ-ನಮ್ಮ ನಿತ್ಯಸೂರೀಶ್ವರನನ್ನು, ನಿಱ್ಕ-ಹೊರತು, ಪೋಯ್-ಬೇರೇಕಡೆಹೋಗಿ, ಕೞಿಯ-ಲೋಕಾತಿಶಾಯಿಯಾಗುವಂತೆ, ಮಿಕನಲ್ಲ – ಅತಿ ಶ್ಲಾಘನೀಯವಾದ, ವಾನ್ಕವಿಕೊಣ್ಡು-ದಿವ್ಯಕವಿತೆಯನ್ನು ಸ್ವೀಕರಿಸಿ, ಪುಲವೀರ್

ಕಾಳ್-ಪ್ರಾಜ್ಞರಾದ ನೀವುಗಳು, ಇಳ್ಳಿಯ ಕರುದಿ-ಕೆಳಗೆಬೀಳಲು ಆಶಿಪಟ್ಟು, ಓರ್ ಮಾನಿಡಮ್-ಒಂದು (ಕ್ಷುದ್ರವಾದ) ಮಾನುಷಜಾತಿಯನ್ನು, ಪಾಡಲ್-ಹಾಡುವುದರಿಂದ, ಎ಼ ಆವದು-ಏನುಫಲವುಂಟು ? (ಅನ್ತಹ ಸ್ತೋತ್ರಗಳಿಂದ ಏನೂ ಪ್ರಯೋಜನವಿಲ್ಲವೆಂದು ಭಾವವು.)

( ಸ-ಗಾ-ರ || )—

**ನಿತ್ಯಂ ಸನ್ತತಕಿಙ್ಕರತ್ವವಿಭವಂ ಭೋಗ್ಯಂ ಪರಂ ಪಾವನಂ**
**ಭಕ್ತೇಭ್ಯೋ ವಿತರನ್ತಮಚ್ಯುತಮಮುಂ ಸೂರೀನ್ದ್ರನಾಥಂ ವಿನಾ |**
**ಅನ್ಯತ್ರ ಸ್ವಯಮದ್ಯ ಯೂಯಮಸಹ ! ಶ್ಲಾಘ್ಯಾಃ ಕವೀನ್ದ್ರಾ ಅಪಿ**
**ಭ್ರಾನ್ತಾಃ ಕ್ಷುದ್ರನರಸ್ತುತೌಹಿ ನಿರತಾಃ! ಕಿಂ ಸ್ಯಾತ್ಫಲಂ ವಸ್ತುತಃ?||**

ತಾ|| (ನಿತ್ಯಸೂರಿಸೇವ್ಯನಾದ ಭಗವನ್ತನನ್ನು ಹೊರತು ಕ್ಷುದ್ರರನ್ನು ಸ್ತೋತ್ರ ಮಾಡಿ ಏನುಫಲವೆಂದು ಹೇಳುತ್ತಾರೆ.) ಅವಿಚ್ಛಿನ್ನವಾಗಿ ಅನೇಕ ಕಲ್ಪಗಳಲ್ಲೂ ನಿತ್ಯಕೈಂಕರ್ಯವನ್ನು ನಮಗೆ ಉಂಟುಮಾಡುವ ನಿತ್ಯಸೂರೀಶ್ವರನನ್ನು ಹೊರತು ಇತರರನ್ನು ನಿಮ್ಮ ದಿವ್ಯಕವಿತೆಯಿಂದ ಸ್ತೋತ್ರಮಾಡಲು ಉದ್ಯುಕ್ತರಾಗಿ ಪ್ರಾಜ್ಞರಾದ ನೀವು ಕ್ಷುದ್ರ ಮಾನುಷಜಾತಿಯನ್ನು ಹಾಡಿದರೆ ಅದರಿಂದ ನಿಮಗೇನು ಫಲ ?

(೪) ಎನ್ನಾವದೆತ್ತನೈ ನಾಳೈಕ್ಕು ಪೋದುಮ್ ಪುಲವೀರ್‌ಕಾಳ್,
ಮನ್ನಾ ಮನಿಶರೈ ಪ್ಪಾಡಿಪ್ಪಡೈಕ್ಕುಮ್ ಪೆರುಮ್ ಪೊರುಳ್,
ಮಿನ್ನಾರ್ ಮಣಿಮುಡಿ ವಿಣ್ಣವರ್‌ತಾದೈಯೈ ಪ್ಪಾಡಿನಾಲ್,
ತನ್ನಾಗವೇ ಕೊಣ್ಡು ಶನ್ಮಮ್ ಶೆಯ್ಯಾಮೈಯುಮ್
ಕೊಳ್ಳುಮೇ.

ಪ್ರ|| ಪುಲವೀರ್‌ಕಾಳ್-ವಿದ್ವಾಂಸರೇ, ಮನ್ನಾ-ಅಸ್ಥಿರವಾದ, ಮನಿಶರೈ-ಮನುಷ್ಯವರ್ಗವನ್ನು, ಪಾಡಿ-(ಕವಿತೆಯಿಂದ) ಸ್ತುತಿಸಿ, ಪಡೈಕ್ಕುಮ್ – ಪಡೆಯಬಹುದಾದ, ಪೆರುಮ್ ಪೊರುಳ್-ಮಹಾಸಮ್ಪತ್ತು, ಎ಼ ಆವದು– ಯಾವುದು ಆಗಿರುವುದು ? ಎತ್ತನೈ ನಾಳೈಕ್ಕು ಪೋದುಮ್-ಎಷ್ಟುದಿವಸಗಳಿಗೆ ಸಾಕಾಗುವುದು? ಮಿನ್ ಆರ್–ಮಹಾತೇಜಃಪೂರ್ಣವಾದ, ಮಣಿಮುಡಿ – ರತ್ನಕಿರೀಟವುಳ್ಳ, ವಿಣ್ಣವರ್‌ತಾದೈಯೈ–ನಿತ್ಯಸೂರಿಗಳಿಗೆ ಜನಕನಾದ ಸರ್ವೇಶ್ವರನನ್ನು, ಪಾಡಿನಾಲ್–ಹಾಡಿದರೆ, ತನ್ನಾಗವೇಕೊಣ್ಡು – ತನಗೇ ಅನನ್ಯಾರ್ಹವೆಂದುಭಾವಿಸಿ, ಶನ್ಮಮ್ ಶೆಯ್ಯಾಮೈಯುಮ್–(ಇತರ ಸ್ತೋತ್ರದಿಂದ ಉಂಟಾಗುವ) ಜನ್ಮವು ನಾಶಹೊಂದುವಂತೆ, ಕೊಳ್ಳುಮೇ–ನಿಮ್ಮನ್ನು ಸ್ವೀಕರಿಸುವನಷ್ಟೆ.

( ಸ-ಗಾ-೮ ॥ )—

ಪ್ರಾಜ್ಞಾಃ! ಕಿಂ ಫಲಮದ್ಯ ಹೇ! ಕವಿವರಾಸ್ಸ್ತುತ್ವಾ ನರಾನಸ್ಥಿರಾನ್
ಪ್ರಾಪ್ಸ್ಯಂ ವಃ? ಕಿಮಿದಂ ಚಿರಾಯ ಭವತಾಂ ಭೋಗ್ಯಂ ಭವೇದಲ್ಪಕಮ್ ।
ಭಾಸ್ವದ್ರತ್ನಕಿರೀಟಮಚ್ಯುತಮಮುಂ ಸೂರೀನ್ದ್ರನಾಥಂ ಹರಿಂ
ಸ್ತುತ್ವಾ ಸ್ಯಾದ್ಭವತಾಮನನ್ಯಸುಲಭಂ ಮುಕ್ತೇಃ ಪದಂ ಶಾಶ್ವತಮ್ ॥

ತಾ॥ ಎಲೈ-ವಿದ್ವಾಂಸರೇ! ಅಸ್ಥಿರವಾದ ಮನುಷ್ಯವರ್ಗವನ್ನು ಸ್ತೋತ್ರ ಮಾಡಿ ನೀವು ಯಾವಸಮ್ಪತ್ತನ್ನು ಪಡೆಯುವಿರಿ? ಅದು ಎಷ್ಟುದಿವಸಗಳಿಗೆ ಸಾಕಾಗುವುದು? ದಿವ್ಯತೇಜೋವಿರಾಜಮಾನ ರತ್ನಕಿರೀಟಧಾರಿಯಾದ ನಿತ್ಯಸೂರಿ ನಾಯಕನನ್ನು ನೀವು ಹಾಡಿದರೆ ನಿಮಗೆ ಜನ್ಮಸಮ್ಬನ್ಧವಿಲ್ಲದಂತೆ ನಿಮ್ಮನ್ನು ಅನನ್ಯಾರ್ಹವಾಗಿ ಭಾವಿಸಿ ಸ್ವೀಕರಿಸುವನಷ್ಟೆ.

(೬) ಕೊಳ್ಳುಮ್ ಪಯನಿಲ್ಲೈಕ್ ಕುಪ್ಪೈಕಿಳರ್ತ್ತನ್ನ ಶೆಲ್ವತ್ತೈ,
ವಳ್ಳಲ್ ಪುಕೞ್‌ನ್ದು ನುಮ್‌ವಾಯ್ಮೈಯಿೞಕ್ಕುಮ್
ಪುಲವೀರ್‌ಕಾಳ್,
ಕೊಳ್ಳಕ್ಕುಱೈವಿಲನ್ ವೇಣ್ಡಿಱ್ಱೆಲ್ಲಾಮ್ ತರುಮ್
ಕೋದಿಲನ್
ವಳ್ಳಲ್ ಮಣಿವಣ್ಣನ್ ತನ್ನೈಕ್ಕವಿಶೊಲ್ಲ ವಮ್ಮಿನೋ.

ಪ್ರ॥ ಕೊಳ್ಳುಮ್‌ಪಯನ್-ಹೊಂದಬಹುದಾದ ಫಲವು, ಇಲ್ಲೈ-ಇಲ್ಲದಂತೆ, ಕುಪ್ಪೈಕಿಳರ್‌ತ್ತು ಅನ್ನ-ಕುಪ್ಪೆ (ಅಶುದ್ಧ ಕ್ಷುದ್ರವಸ್ತುರಾಶಿ) ಯನ್ನು ಕೆದಕಿದಂತೆ ದೋಷವೇ ತೋರುವಂತಿರುವ, ಶೆಲ್ವತ್ತೈ-ಸಮ್ಪತ್ತುಳ್ಳ ಕ್ಷುದ್ರಜಾತಿಯನ್ನು, ವಳ್ಳಲ್-ಮಹೋದಾರವಾದುದೆಂದು, ಪುಕೞ್‌ನ್ದು-ಸ್ತೋತ್ರಮಾಡಿ, ನುಮ್ ವಾಯ್ಮೈ-ನಿಮ್ಮ ಸತ್ಯವಾದಿತ್ವವೆಂಬ ವಾಗ್ಮಿತ್ವವನ್ನು, ಇೞಕ್ಕುಮ್-ನಾಶಪಡಿಸಿ ಕೊಳ್ಳುವ, ಪುಲವೀರ್‌ಕಾಳ್-ವಿದ್ವಾಂಸರೇ, ಕೊಳ್ಳ-ಸ್ವೀಕರಿಸಲು ಅತ್ಯನ್ತ ಶ್ಲಾಘನೀಯವಾದ ಐಶ್ವರ್ಯವುಳ್ಳ, ಕುಱೈವಿಲನ್-ಕೊರತೆಯಿಲ್ಲದಂತೆ ಪರಿಪೂರ್ಣನಾದ, ವೇಣ್ಡಿಱ್ಱು ಎಲ್ಲಾಮ್-ಬೇಕಾದುದನ್ನೆಲ್ಲಾ, ತರುಮ್-ಕೊಡತಕ್ಕವನಾದ, ಕೋದು ಇಲ್-ದೋಷಲೇಶವೂ ಇಲ್ಲದ, ಎವಳ್ಳಲ್-ನನ್ನ ಮಹೋದಾರಸ್ವಭಾವನಾದ, ಮಣಿವಣ್ಣನ್‌ತನ್ನೈ-ನೀಲರತ್ನದಂತೆ ದಿವ್ಯಕಾಂತಿಯುಳ್ಳ ಸ್ವಾಮಿಯನ್ನು, ಕವಿಶೊಲ್ಲ-(ಕವಿತೆಯಿಂದ) ಸ್ತೋತ್ರಮಾಡುವುದಕ್ಕಾಗಿ, ವಮ್ಮಿನ್-ಬನ್ನಿರಿ.

( ಸ-ಗಾ-ರ || )—

ಪ್ರಾಪ್ಯಂ ನೈವ ಹಿ ಕಿಞ್ಚಿದಸ್ತಿ ಭವತಾಂ ಪ್ರಾಜ್ಞಾಃ ಕವೀನ್ದ್ರಾ ವೃಥಾ
ಸ್ತುತ್ವಾ ಕ್ಷುದ್ರಧನಾಶ್ರಯಾನಿಹ ನರಾನ್ ಮಿಥ್ಯಾಽಪ್ಯುದಾರಾನಿವ |
ಸ್ತವ್ಯಂ ಪೂರ್ಣಗುಣಂ ತ್ವಭೀಷ್ಟವರದಂ ನಿರ್ದೋಷಮೇವಾಚ್ಯುತಂ
ನಿತ್ಯೌದಾರ್ಯನಿಧಿಂ ಹರಿಂ ಮಣಿನಿಭಂ ಸ್ತೋತುಂ ಸಮಾಗಚ್ಛತ ||

ತಾ|| ನಿಷ್ಫಲವಾದ ಅಶುದ್ಧರಾಶಿಯಂತಿರುವ ಕ್ಷುದ್ರಸಂಪತ್ತುಳ್ಳವರನ್ನು ಮಹೋದಾರರೆಂದು ಸ್ತೋತ್ರಮಾಡಿ ನಿಮ್ಮ ವಾಗ್ಮಿತ್ವವನ್ನೂ ಸತ್ಯವಾದಿತ್ವವನ್ನೂ ಹಾಳುಮಾಡಿಕೊಳ್ಳುವ ವಿದ್ವಾಂಸರೇ ! ಅಪಾರವಾದ ಪರಮೈಶ್ವರ್ಯವುಳ್ಳ ನಿತ್ಯ ಪರಿಪೂರ್ಣನಾದ, ಸಕಲಾಭೀಷ್ಟಪ್ರದನಾದ, ನಿರ್ದೋಷನಾದ, ಮಹೋದಾರಸ್ವಭಾವನಾದ-ನೀಲಮಣಿವರ್ಣನನ್ನು ನಿಮ್ಮ ಕವಿತೆಯಿಂದ ಸ್ತೋತ್ರಮಾಡುವುದಕ್ಕಾಗಿ ನೀವೆಲ್ಲರೂ ಬನ್ನಿರಿ.

(೭) ವಮ್ಮಿನ್ ಪುಲವೀರ್ ನುಮ್ ಮೆಯ್‌ವರುತ್ತಿ ಕ್ಕೈಶೆಯ್
ದುಯ್‌ಮಿನೋ,
ಇಮ್ಮನ್ನುಲಕಿನಿಲ್ ಚೆಲ್ವರಿಪ್ಪೋದಿಲ್ಲೈ ನೋಕ್ಕಿನೋಮ್,
ನುಮ್ಮಿನ್ ಕವಿಕೊಣ್ಡು ನುಮ್ನುಮಿಟ್ಟಾ ದೆಯ್‌ವಮೇತ್ತಿ
ನಾಲ್,
ಶೆಮ್ಮಿನ್‌ಶುಡರ್ಮುಡಿ ಯೆನ್ ತಿರುಮಾಲುಕ್ಕು ಚ್ಚೇರುಮೇ.

ಸ ಪ್ರ|| ಪುಲವೀರ್-ವಿದ್ವಾಂಸರಾದ ನೀವು, ವಮ್ಮಿನ್-ಬನ್ನಿರಿ; ನುಮ್‌ಮೆಯ್ ವರುತ್ತಿ-ನಿಮ್ಮ ಶರೀರವನ್ನು ಕೃಶಮಾಡಿಕೊಂಡು, ಕೈಶೆಯ್ದು-ಕೈಕೆಲಸಮಾಡಿ, ಉಯ್‌ಮಿನೋ-ಜೀವಿಸಿರಿ ; ಇಮ್ಮನ್-ಪ್ರವಾಹತೋನಿತ್ಯವಾದ, ಇ ಉಲಕಿನಿಲ್-ಈ ಲೋಕದಲ್ಲಿ, ಶೆಲ್ವರ್-(ವಾಸ್ತವವಾಗಿ) ಐಶ್ವರ್ಯವಂತರು (ದಾನಶೀಲರಾದ ಉದಾರಗುಣವುಳ್ಳ ಧನಿಕರು), ಇಪ್ಪೋದು-ಈ ಕಾಲದಲ್ಲಿ, ಇಲ್ಲೈ-ಇಲ್ಲ. ನೋಕ್ಕಿನೋಮ್-(ನಾವು) ಚೆನ್ನಾಗಿ ಪರಿಶೀಲಿಸಿ ನೋಡಿದೆವು. ನುಮ್ ಇನ್ ಕವಿಕೊಣ್ಡು-ನಿಮ್ಮ ಮಧುರವಾದ ಕವಿತ್ವವನ್ನು ಅಂಗೀಕರಿಸಿ, ನುಮ್‌ನುಮ್-ನಿಮ್ಮ ನಿಮ್ಮ ಇಟ್ಟಾದೆಯ್‌ವಮ್ - ಇಷ್ಟದೇವತೆಗಳನ್ನು, ಏತ್ತಿನಾಲ್ - ಸ್ತೋತ್ರಮಾಡಿದರೆ, ಶೆಮ್ಮಿನ್ ಶುಡರ್ಮುಡಿ-ಅತ್ಯದ್ಭುತ ದಿವ್ಯತೇಜಃಪ್ರಕಾಶವುಳ್ಳ ಕಿರೀಟವನ್ನು ಧರಿಸಿರುವ, ಎನ್ ತಿರುಮಾಲುಕ್ಕೇ-ನನ್ನ ಸ್ವಾಮಿಯಾದ ಶ್ರಿಯಃಪತಿಯಾದ ಸರ್ವೇಶ್ವರನಿಗೇ, ಶೇರುಮ್-ಸೇರುವುದು.

( ಸ-ಗಾ-ರ- ॥ )—

**ಆಯಾತಾರ್ಯಾಃ ಕವೀನ್ದ್ರಾಃ! ಕರಕೃತಿತತಿಭಿರ್ದೇಹಯಾತ್ರಾಂ ಕುರುಧ್ವಂ!**
**ಲೋಕೇಽಸ್ಮಿನ್ನದ್ಯ ನೈವ ಪ್ರಭುವರಧನಿಕಾಸ್ಸನ್ತಿ ದೃಷ್ಟಂ ತದೇತತ್ ।**
**ಯುಷ್ಮಾಕಂ ಸತ್ಕವಿತ್ವಂ ತ್ವಭಿಮತವಿಷಯೇ ದೇವಬೃನ್ದೇ ಪ್ರಯುಕ್ತಂ**
**ಸರ್ವಂ ಸ್ತೋತ್ರಂ ಭವೇನ್ನೋ ಮಣಿಮಕುಟಭೃತಶ್ಶ್ರೀಪತೇರೇವ ಸತ್ಯಮ್॥**

ತಾ॥ (ಕ್ಷುದ್ರರನ್ನು ಸ್ತೋತ್ರಮಾಡುವುದಕ್ಕಿಂತ ಶರೀರಶ್ರಮವನ್ನು ಹೊಂದು ವಂತೆ ಕೈಕೆಲಸಗಳನ್ನು ಮಾಡಿ ಜೀವಿಸುವುದೇ ಮೇಲು—ಎಂದು ಹೇಳುತ್ತಾರೆ.) ಪ್ರಾಜ್ಞರಾದ ಕವೀನ್ದ್ರರೇ! ಬನ್ನಿರಿ. ನಿಮ್ಮ ಶರೀರವನ್ನು ಕೃಶಮಾಡಿಕೊಂಡಾದರೂ ಕೈಕೆಲಸಗಳನ್ನು ಮಾಡಿ ಜೀವಿಸಿರಿ. ಪ್ರವಾಹತೋನಿತ್ಯವಾದ ಈ ಲೋಕದಲ್ಲಿ ವಸ್ತುತಃ ಐಶ್ವರ್ಯವಂತರಾದ (ಉದಾರರಾದ) ಭಾಗ್ಯಶಾಲಿಗಳು ಈ ಕಾಲದಲ್ಲಿ ಇಲ್ಲ. ನಾವು ಚೆನ್ನಾಗಿ ಪರಿಶೀಲಿಸಿ ನೋಡಿದೆವು. ನಿಮ್ಮ ಮಧುರ ಕವಿತೆಯಿಂದ ನಿಮ್ಮ ಇಷ್ಟದೇವತೆಗಳನ್ನು ಸ್ತೋತ್ರಮಾಡಿದರೆ ಅದು ದಿವ್ಯತೇಜೋವಿರಾಜಮಾನ ಕಿರೀಟಧಾರಿಯಾದ ನಮ್ಮ ಸ್ವಾಮಿಯಾದ ಶ್ರಿಯಃಪತಿಯಾದ ಭಗವನ್ತನಿಗೇ ಸೇರುವುದು.

(೭) ಶೀರುಮ್ ಕೊಡೈ ಪುಕಳ್ಎಲ್ಲೈಯಿಲಾನೈ, ಓರ್‌ಆಯಿರಮ್
ಪೇರುಮುಡೈಯ ಪಿರಾನೈಯಲ್ಲಾಲ್ ಮಱ್ಱು
ಯಾರೈ ಕಿಲೇನ್
ಮಾರಿಯನೈಯ ಕೈಮಾಲ್ವರೈಯೊಕ್ಕುಮ್
ತಿಣ್‌ತೋಳೆನ್ಱು
ಪಾರಿಲೋರ್‌ಪಱ್ಱೈಯೈ ಪ್ಪಚ್ಚೈಪ್ಪಶುಮ್
ಪೊಯ್‌ಗಳ್ ಪೇಶವೇ

ಪ್ರ॥ ಶೀರುಮ್–(ತನಗೆ) ತಕ್ಕ, ಕೊಡೈ–ದಾತೃತ್ವವನ್ನೂ, ಪುಕಳ್–ಕೀರ್ತಿಯನ್ನೂ, ಎಲ್ಲೈ ಇಲಾನೈ – ಅಪರಿಚ್ಛಿನ್ನವಾಗಿ ಪಡೆದಿರುವ, ಓರ್ ಆಯಿರಮ್ ಪೇರುಮ್ ಉಡೈಯ–ಅದ್ವಿತೀಯವಾದ ಸಹಸ್ರನಾಮಗಳುಳ್ಳ, ಪಿರಾನೈ–(ಮಹೋಪಕಾರಕನಾದ) ಸ್ವಾಮಿಯನ್ನು, ಅಲ್ಲಾಲ್–ಹೊರತು, ಮಱ್ಱು–ಬೇರೆ, ಪಾರಿಲ್–ಭೂಲೋಕದಲ್ಲಿ, ಓರ್‌ಪಱ್ಱೈಯೈ–ಒಂದು ಕ್ಷುದ್ರಪದಾರ್ಥವನ್ನು, ಕೈ–ಹಸ್ತಾಗ್ರವು, ಮಾರಿ ಅನೈಯ ಎನ್ಱು–ವರ್ಷವನ್ನು ಸುರಿಯುವ ಉದಾರವಾದ ಮೇಘಕ್ಕೆ

ಸದೃಶವೆಂದೂ, ತಿಣ್‌ತೋಳ್-ದೃಢವಾದ ಬಾಹುಗಳು, ಮಾಲ್‌ವರೈ-ಮಹಾಪರ್ವತಗಳಿಗೆ, ಒಕ್ಕುಮೆನುಮ್-ಸದೃಶಗಳೆಂದೂ, ಪಚ್ಚೈಪ್ಪಶುಮ್‌ಪೊಯ್‌ಕಳ್-(ಸತ್ಯಮಿಶ್ರವಲ್ಲದ) ವೃಥಾನೂತನಮಿಥ್ಯಾವಚನಗಳನ್ನೇ, ಪೇಶ-ಹೇಳಲು, ಯಾನ್-ನಾನು, ಕಿಲ್ಲೇನ್-ಶಕ್ತನಲ್ಲ. (ಪರಿಪೂರ್ಣನಾದ ಸರ್ವೇಶ್ವರನನ್ನು ಆಶ್ರಯಿಸಿದ ನಾನು ಇಂತಹ ಮಿಥ್ಯೋಕ್ತಿಗಳನ್ನು ಹೇಳಿ ಕ್ಷುದ್ರರನ್ನು ಸ್ತೋತ್ರಮಾಡಲಾರೆನು—ಎಂದು ಭಾವವು)

( ಸ-ಗಾ-ರ || )—

ದಾನೇ ಚಾಪ್ರತಿಮಂ ಮಹಾಗುಣನಿಧಿಂ ನಿಸ್ಸೀಮಮೇವಾಚ್ಯುತಂ
ದೇವಂ ನಾಮಸಹಸ್ರಯುಕ್ತಮತುಲಂ ವಿಷ್ಣುಂ ವಿನಾಽನ್ಯಾನ್ ಭುವಿ ।
ಕ್ಷುದ್ರಾನ್ ದಾನಪರಾಃ ಪಯೋದಸದೃಶಾ ಹಸ್ತಾಶ್ಚ ವೋ ಬಾಹವೋ
ಽಪ್ಯೇತೇ ಪರ್ವತಸನ್ನಿಭಾ ಇತಿ ಭೃಶಂ ಮಿಥ್ಯಾವಚೋ ನ ಬ್ರುವೇ ||

ತಾ|| ಅಪರಿಚ್ಛಿನ್ನವಾದ ದಾತೃತ್ವವನ್ನೂ ತಜ್ಜನ್ಯವಾದ ಕೀರ್ತಿಯನ್ನೂ ಪಡೆದಿರುವ ಸಹಸ್ರನಾಮಪ್ರತಿಪಾದ್ಯನಾದ ಸ್ವಾಮಿಯನ್ನು ಹೊರತು, ಬೇರೆ ಕ್ಷುದ್ರ (ಮಾನುಷ) ಜಾತಿಯನ್ನು ಮಹೋದಾರಹಸ್ತವೆಂದೂ ಮೇಘಸದೃಶವೆಂದೂ ಪರ್ವತಸದೃಶಬಾಹುವೆಂದೂ ಸ್ತುತಿಸಲು ಬರೀ ಹೊಸ ಸುಳ್ಳುಮಾತುಗಳನ್ನೇ ಹೇಳಲು ನಾನು ಶಕ್ತನಲ್ಲ. (ನಾನು ಇಂತಹ ಮಿಥ್ಯಾವಚನಗಳನ್ನು ಎಂದಿಗೂ ಹೇಳಲಾರೆನೆಂದು ತಾತ್ಪರ್ಯ.)

(೮) ವೇಯಿನ್ಮಲಿಪುರೈತೋಳಿ ಪಿನ್ನೈಕ್ಕು ಮಣಾಳನೈ,
ವರು: ಆಯ ಪೆರುಮ್‌ಪುಕಳೆಲ್ಲೆಯಿಲಾದನ ಪಾಡಿಪ್ಪೋಯ್,
ಉ: ಕಾಯಮ್ ಕಳಿತ್ತವನ್ ತಾಳಿಣೈಕ್ಕೀಳ್ ಪುಕುಮ್ ಕಾದಲನ್,
ಈ ಮಾಯ ಮನಿಶರೈ ಯೆನ್‌ಶೊಲ್ಲವಲ್ಲೇನೆನ್‌ವಾಯ್‌ಕೊಣ್ಡೇ
೯

ಪ್ರ|| ವೇಯಿನ್‌ಮಲಿ – (ರಮಣೀಯವಾಗಿ ದುಂಡಾಗಿರುವ ಹಸೀ) ಬಿದುರಿಗಿಂತ ಚೆನ್ನಾಗಿ, ಪುರೈ-ಪ್ರಕಾಶವುಳ್ಳ, ತೋಳಿ-ತೋಳುಗಳುಳ್ಳ, ಪಿನ್ನೈಕ್ಕು-ನೀಳಾದೇವಿಗೆ, ಮಣಾಳನೈ – (ನಿತ್ಯಾಭಿಮತನಾದ) ಪತಿಯಾದ ಕೃಷ್ಣನನ್ನು, ಆಯ-ಸ್ವರೂಪಾನುಗುಣವಾಗಿ, ಪೆರುಮ್- ಅಪರಿಚ್ಛಿನ್ನವಾದ, ಎಲ್ಲೈಯಿಲಾದನ-ಅಸಂಖ್ಯಾತವಾದ, ಪುಕಳ್-ಗುಣಗಳನ್ನು, ಪಾಡಿ-ಹಾಡಿ, ಪೋಯ್ – (ಬಹುಕಾಲ) ನಡೆದು, ಕಾಯಮ್-ಶರೀರವನ್ನು, ಕಳಿತ್ತು-ತ್ಯಜಿಸಿ, ಅವನ್ ತಾಳಿಣೈಕ್ಕೀಳ್-ಅವನ

ಚರಣಯುಗಳದ ಕೆಳಗೆ, ಪುಕುಮ್-ಸೇರುವುದರಲ್ಲಿ, ಕಾದಲ್-ಆಶೆಯುಳ್ಳ ನಾನು, ಮಾಯಮನಿಶರೈ-ಪ್ರಕೃತಿವಶ್ಯರಾದ (ಕ್ಷುದ್ರ) ಮನುಷ್ಯರನ್ನು ಕುರಿತು, ಎನ್‌ವಾಯ್‌ ಕೊಣ್ಡು-ನನ್ನ ವಾಕ್ಕಿನಿಂದ, ಎನ್ ಶೊಲ್ಲವಲ್ಲೇನ್-ಏನುಹೇಳಬಲ್ಲೆನು ? (ಅವರನ್ನು ಹೇಗೆ ಸ್ತೋತ್ರಮಾಡಬಲ್ಲೆನು ? )

( ಸ-ಗಾ-ಶ || )—

ನೀಳಾಯಾಃ ಪತಿಮಚ್ಯುತಂ ಸುವಿಲಸದ್ಬಾಹೋರ್ಗುಣಾನಾಂ ಗಣೈ-
ಸ್ಸ್ತುತ್ವಾಽನನ್ತಶತೈಶ್ಚಿರಾಯ ಬಹುಧಾ ಮೇ ದೇಹಯಾತ್ರಾಂ ಚರನ್ |
ತತ್ಪಾದಾಮ್ಬುಜಸಂಶ್ರಯೋತ್ಸುಕತಮಃ ಕಿಂ ಕ್ಷುದ್ರಮರ್ತ್ಯಾನ್ ಭುವಿ
ಸ್ತೋತುಂ ಮೇ ವಚಸಾ ಬ್ರವೀಮಿ ಕಿಮಪಿ ಪ್ರಾಜ್ಞೋಽದ್ಯ
ಮಾಯಾವಶಾನ್ ||

ತಾ|| (ನಾನು ಇತರರನ್ನು ಸ್ತೋತ್ರಮಾಡಲು ಯತ್ನಿಸಿದರೂ ನನ್ನ ವಾಕ್ಕು ಅವನನ್ನು ಹೊರತು ಮಿಕ್ಕವರನ್ನು ಸ್ತೋತ್ರಮಾಡಲಾರದು—ಎಂದು ಹೇಳುತ್ತಾರೆ.) ಸುನ್ದರವಾದ ಬಾಹುಗಳುಳ್ಳ ನೀಳಾದೇವಿ (ನಪ್ಪಿನ್ನೈಪ್ಪಿರಾಟ್ಟಿ) ಯನ್ನು ವರಿಸಿರುವ ಶ್ರೀಕೃಷ್ಣನ ಸ್ವಾಭಾವಿಕಾನವಧಿಕಾತಿಶಯಾಸಂಖ್ಯೇಯ ಕಲ್ಯಾಣಗುಣಗಳನ್ನು ಹಾಡಿ, ಈ ಶರೀರವನ್ನು ಬಹುಕಾಲ ಯಾತ್ರೆಯಿಂದ ತ್ಯಜಿಸಿ, ಅವನ ಚರಣಯುಗಳ ಸೇವೆಯನ್ನೇ ಹೊಂದಬೇಕೆಂಬ ಆಶೆಯುಳ್ಳ ನಾನು ಪ್ರಕೃತಿವಶ್ಯರಾದ ಕ್ಷುದ್ರಮಾನುಷರನ್ನು .ನನ್ನ ವಾಕ್ಕಿನಿಂದ ಹೇಗೆ ಸ್ತೋತ್ರಮಾಡಬಲ್ಲೆನು ? (ಅವರ ವಿಷಯದಲ್ಲಿ ನನ್ನ ವಾಕ್ಕು ಹೊರಡಲೇ ಹೊರಡದು--ಎಂದು ಭಾವವು.)

(೯) ವಾಯ್‌ಕೊಣ್ಡು ಮಾನಿಡಮ್ ಪಾಡವನ್ದ ಕವಿಯೇನಲ್ಲೇನ್,
ಆಯ್‌ಕೊಣ್ಡ ಶೀರ್‌ವಳ್ಳಲಾಳಿಪ್ಪಿರಾನೆನಕ್ಕೇ ಯುಳನ್,
ಶಾಯ್‌ಕೊಣ್ಡ ವಿಮ್ಮೈಯುಮ್ ಶಾದಿತ್ತು ವಾನವರ್
ನಾಟ್ಟೈಯುಮ್,
ನೀಕಣ್ಡುಕೊಳ್ಳೆನ್ಱು ವೀಡುಮ್ ತರುಮ್ ನಿನ್ಱು ನಿನ್ಱೇ.

ಪ್ರ|| ವಾಯ್ ಕೊಣ್ಡು-ವಾಗಿನ್ದ್ರಿಯದಿಂದ, ಮಾನಿಡಮ್-ಮನುಷ್ಯಜಾತಿಯನ್ನು, ಪಾಡವನ್ದ-ಹಾಡುವುದಕ್ಕೆ ಬಂದ, ಕವಿಯೇನ್ ಅಲ್ಲೇನ್-ಕವಿಯಾದವನಲ್ಲ (ನಾನು); ಆಯ್-(ವೇದಾನ್ತಶಾಸ್ತ್ರದಲ್ಲಿ) ನಿರ್ಣೀತವಾದ, ಶೀರ್-ಆನನ್ದಾದಿ

ಗುಣಗಳನ್ನು, ಕೊಣ್ಡು-ಸ್ವಭಾವವಾಗಿ ಪಡೆದಿರುವ, ವಳ್ಳಲ್-ಮಹೋದಾರನಾದ, ಆೞಿ-ಚಕ್ರಪಾಣಿಯಾದ, ಪಿರಾನ್-ಸ್ವಾಮಿಯು, ಎನಕ್ಕೇಯುಳನ್-ನನಗೇ ಅಸಾಧಾರಣವಾಗಿ ಇರುವವನು. ಶಾಯ್‌ಕೊಣ್ಡ - ಅತ್ಯುಜ್ಜ್ವಲವಾದ, ಇಮ್ಮೈಯುಮ್ - (ಐಹಿಕವಾದ) ಅರ್ಚಾವತಾರಾನುಭವವನ್ನೂ, ಶಾದಿತ್ತು - ಉಂಟುಮಾಡಿ, ವಾನವರ್‌ನಾಟ್ಟೈಯುಮ್ - ನಿತ್ಯಸೂರಿಗಳಿಗೆ ಸೇರಿದ ಪರಮಪದ ಸಾಮ್ರಾಜ್ಯವನ್ನೂ, ನೀಕಣ್ಡುಕೊಳ್ ಎನ್ಱು-ನೀನು ಕಂಡು ಅನುಭವಿಸು ಎಂದು, ವೀಡುಮ್ - ಮೋಕ್ಷಾನನ್ದವನ್ನೂ, ನಿನ್ಱು ನಿನ್ಱು - ಕ್ರಮವಾಗಿ ನಿಂತು ನಿಂತು, ತರುಮ್-ಕೊಡುವನು.

( ಸ-ಗಾ- ರ || )—

ನಾಹಂ ಮಾನುಷವರ್ಗಶಂಸನಪರೋ ವಾಚಾ ಕವಿಶ್ಶ್ರೀಧರಂ
ವೇದಾನ್ತಪ್ರತಿಪಾದ್ಯವೈಭವಮುದಾರಾಗ್ರ್ಯಂ ಪ್ರಭುಂ ಚಕ್ರಿಣಮ್ |
ಸಂಶ್ರಿತ್ಯಾಸ್ಮಿ ಕೃತೀ! ಸ ಏವ ಪರಮೋ ಜ್ಯೋತಿರ್ಮಯೋ ಯಸ್ತು ಮಾ-
ಮರ್ಚಾಮೂರ್ತಿಪರಾತ್ಪರಾದ್ಯನುಭವೈರ್ಮುಕ್ತಿಂ ಕರೋತ್ಯಚ್ಯುತಃ ||

ತಾ|| (ಪರಮೋದಾರನಾದ ಅವನೇ ನನ್ನ ಸ್ತೋತ್ರಕ್ಕೆ ವಿಷಯಭೂತನಾಗಿರುವಲ್ಲಿ ನಾನು ಇತರರ ಸ್ತೋತ್ರಕ್ಕೆ ಅಧಿಕಾರಿಯಲ್ಲವೆಂದು ಹೇಳುತ್ತಾರೆ.) ನಾನು ಮಾನುಷಜಾತಿಯನ್ನು ನನ್ನ ವಾಕ್ಕಿನಿಂದ ಸ್ತೋತ್ರಮಾಡಿ ಹಾಡುವುದಕ್ಕೆ ಬಂದ ಕವಿಯಲ್ಲ. ವೇದಾನ್ತಶಾಸ್ತ್ರನಿರ್ಣೀತವಾದ ಅನನ್ತಾದಿ ಕಲ್ಯಾಣಗುಣಗಳಿಂದ ಭರಿತನಾಗಿ ಮಹೋದಾರಸ್ವಭಾವನಾದ ಚಕ್ರಪಾಣಿಯೇ ನನಗೆ ಅಸಾಧಾರಣ ಸ್ವಾಮಿಯಾಗಿರುವವನು. ಅವನೇ ಅತ್ಯುಜ್ಜ್ವಲವಾದ ಅರ್ಚಾವತಾರದ ಅನುಭವವನ್ನೂ ನನಗೆ ಉಂಟುಮಾಡಿ, ಪರಮಪದಸಾಮ್ರಾಜ್ಯವನ್ನೂ ಮೋಕ್ಷಾನನ್ದವನ್ನೂ ಕ್ರಮೇಣ ನನಗೆ ಕೊಡುವನು.

(೧೦) ನಿನ್ಱು ನಿನ್ಱು ಪಲನಾಳುಯ್ಕ್ಕುಮಿವ್ವುಡಲ್ ನೀಕ್ಕಿಪ್ಪೋಯ್,
ತೆನ್ಱು ತೆನ್ಱಾಕಿಲುಮ್ ಕಣ್ಡು ತನ್ನೈ ಕೞಿಪ್ಪಾನೆಣ್ಣಿ,
ಒನ್ಱಿಯೊನ್ಱಿ ಯುಲಕಮ್ ಪಡೈತ್ತಾನ್ ಕವಿಯಾಯಿನೇರ್ಕ್ಕು,
ಎನ್ಱುಮೆನ್ಱುಮಿನಿ ಮಱ್ಱೊರುವರ್ ಕವಿಯೇರ್ಕ್ಕುಮೇ.

ಪ್ರ|| ಪಲನಾಳ್-ಸರ್ವಕಾಲದಲ್ಲೂ, ನಿನ್ಱು ನಿನ್ಱು-ನಿಂತು ನಿಂತು, ಉಯ್ಕ್ಕುಮ್-(ಚೇತನನನ್ನು ವಶೀಕರಿಸಿ) ಉಜ್ಜೀವಿಸುವಂತೆ ಮಾಡುವವನಾಗಿಯೂ

ಇವ್ವುಡಲ್-ಈ ಶರೀರವನ್ನು, ನೀಙ್ಗಿಪ್ಪೋಯ್-ಬಿಟ್ಟುಹೋಗಿ, ಶೆನುಶೆನಾಕಿ ಲುಮ್-ಬಹುಕಾಲವಂ ಕಳೆದುಹೋಗಿಯಾದರೂ, ಕಣ್ಡು-(ಈ ಚೇತನನು ಅವ ನನ್ನು) ಸಾಕ್ಷಾತ್ಕರಿಸಿ, ಶನ್ಮಮ್‌ಕ್ಕಳಿಪ್ಪಾನ್-ಜನ್ಮವನ್ನು ದಾಟುವುದಕ್ಕಾಗಿ, ಎಣ್ಣಿ -ತಾನೇ ಚಿನ್ತಿಸಿ, ಒನ್ರಿ ಒನ್ರಿ-ಪ್ರತಿಸೃಷ್ಟಿಯಲ್ಲೂ ಮನಸ್ಸೈಕಾಗ್ರ್ಯದಿಂದ ಭಾವಿಸಿ, ಉಲಕಮ್ ಪಡೈತ್ತಾನ್-ಲೋಕವನ್ನು ಸೃಷ್ಟಿಸಿದವನಾಗಿಯೂ ಇರುವ ಭಗವನ್ತನ, ಕವಿಯಾಯಿನೇಱ್ಕು-ಸ್ತೋತ್ರವನ್ನು ಮಾಡುವುದಕ್ಕಾಗಿ ಕವಿಯಾದ ನನಗೆ, ಇನಿ-ಇನ್ನುಮೇಲೆ, ಎನುಮೆನುಮ್-ಎಂದೆಂದಿಗೂ (ಯಾವಕಾಲದಲ್ಲಾದರೂ), ಮನ್ರಿ ಸ್ಸಾರುವರ್‌ಕವಿ - ಮತ್ತೊಬ್ಬರನ್ನು ಸ್ತೋತ್ರಮಾಡೋಣವು, ಏಱ್ಕುಮೇ - ಉಚಿತವೋ ?

( ಸ-ಗಾ-ರ ॥ )—

**ಪಾರ್ಶ್ವೇ ತಿಷ್ಠತಿ ನಿತ್ಯಮೇವ ಹಿ ನೃಣಾಂ ದೇಹಾತ್ಯಯೇಽಪಿ ಸ್ವಯಂ**
**ತೇಷಾಂ ಭಾತ್ಯನುಗಃ ಪ್ರಭುಸ್ಸ್ವವಶಗಾನ್ ಕರ್ತುಂ ಸದಾ ತಾನ್ ಹರಿಃ ।**
**ಹರ್ತುಂ ಜನ್ಮಪರಮ್ಪರಾನ್ತು ಜಗತಾಂ ಸ್ರಷ್ಟುಃ ಕಿಲಾಹಂ ಕವಿ-**
**ಸ್ತಸ್ಯೈವ ಸ್ತುತಯೇ ಸದಾ ! ಕಿಮುಚಿತಾ ಭೂಯಾನ್ಮಮಾನ್ಯಸ್ತುತಿಃ? ॥**

ತಾ॥ ( ಸರ್ವೇಶ್ವರಸ್ತೋತ್ರಕರ್ತನಾದ ಕವಿಯಾಗಿರುವ ನನಗೆ ಇತರರ ಸ್ತೋತ್ರದಲ್ಲಿ ಪ್ರಯತ್ನವು ಅನುಚಿತವೆಂದು ಹೇಳುತ್ತಾರೆ). ಸರ್ವಕಾಲದಲ್ಲೂ ಚೇತನೋಜ್ಜೀವನಕ್ಕಾಗಿ ದೀಕ್ಷಿತನಾಗಿಯೂ, ಚೇತನನು ಶರೀರವನ್ನು ಬಿಟ್ಟು ಹೋಗಿ ಅನೇಕ ಕಾಲಾನನ್ತರವಾದರೂ ತನ್ನನ್ನು ಸಾಕ್ಷಾತ್ಕರಿಸಿ ಜನ್ಮಸಮ್ಬನ್ಧ ನಿವೃತ್ತಿಯನ್ನು ಪಡೆಯಲಿ—ಎಂದು ತಾನೇ ಚಿನ್ತಿಸಿ ಪ್ರತಿಸೃಷ್ಟಿಯಲ್ಲೂ ಸಂಕಲ್ಪ ಮಾಡಿ ಲೋಕಸೃಷ್ಟಿ ಮಾಡಿದವನಾಗಿಯೂ, ಇರುವ ಭಗವನ್ತನ ಸ್ತೋತ್ರಕ್ಕಾಗಿ ಹುಟ್ಟಿದ ಕವಿಯಾದ ನನಗೆ ಮತ್ತೊಬ್ಬರನ್ನು ಸ್ತೋತ್ರಮಾಡೋಣವು ಎಂದಿಗಾದರೂ ಉಚಿತವಾಗುವುದೋ ?

(೧೧) ಎಱ್ಕುಮೆನ್ ಪೆರುಮಾನ್‌ಪುಕಳ್ ವಾನವರೀಶನ್ ಕಣ್ಣನ್ ತನಕ್ಕು
ಎಱ್ಕುಮೆನ್ ಪೆರುಮಾನ್‌ಪುಕಳ್ ವಣ್‌ಕುರುಕೂರ್
ಚ್ಚಡಕೋಪನ್ ಶೊಲ್,
ಎಱ್ಕುಮೆನ್ ಪೆರುಮಾನ್‌ಪುಕಳಾಯಿರತ್ತುಳ್ಳಿವೈಯುಂ
ಮೋರ್‌ಪತ್ತು
ಎಱ್ಕುಮೆನ್ ಪೆರುಮಾನ್‌ಪುಕಳ್ ಶೊಲ್ಲವಲ್ಲಾರ್‌ಕ್ಕಿಲ್ಲೈ ಶನ್ಮಮೇ.

ಪ್ರ|| ಏಱ್ಱುಕಮ್-(ಪರತ್ವಸೌಲಭ್ಯಗಳಿಗೆ) ತಕ್ಕ, ಪೆರುಮ್ ಪುಕೞ್-ಮಹಾ ಗುಣಾತಿಶಯ ಖ್ಯಾತಿಯುಳ್ಳವನಾಗಿಯೂ, ವಾನವರೀಶರ್ – ನಿತ್ಯಸೂರೀಶ್ವರನಾಗಿಯೂ ಇರುವ, ಕಣ್ಣನುಕ್ಕು-(ಸೌಲಭ್ಯವಿಶಿಷ್ಟನಾದ) ಶ್ರೀಕೃಷ್ಣನಿಗೆ, ಏಱ್ಱುಕಮ್ಮ್-(ಸ್ತೋತ್ರಮಾಡಲು) ಅನುರೂಪವಾದ, ಪೆರುಮ್‌ಪುಕೞ್-ಜ್ಞಾನಾದಿಗುಣ ಪ್ರಸಿದ್ಧಿಯುಳ್ಳ, ವಣ್‌ಕುರುಕೂರ್ ಶಡಕೋಪನ್-ರಮ್ಯವಾದ ಕುರುಕಾಪುರಿಗೆ ನಿರ್ವಾಹಕರಾದ ಶಠಾರಿಮುನಿವರ್ಯರು, ಶೊಲ್-ರಚಿಸಿದ, ಏಱ್ಱುಕಮ್ – (ಭಗವದ್ಗುಣಾದಿ ವರ್ಣನಕ್ಕೆ) ತಕ್ಕ, ಪೆರುಮ್‌ಪುಕೞ್-ಛನ್ದೋಲಕ್ಷಣಾದಿ ಪ್ರಸಿದ್ಧಿಯುಳ್ಳ, ಆಯಿರತ್ತುಳ್-ಸಹಸ್ರಪದ್ಯಮಾಲಿಯೊಳು, ಏಱ್ಱುಕಮ್-(ಇತರ ಸ್ತೋತ್ರವನ್ನು ಬಿಟ್ಟು ಭಗವಂತನ ಸ್ತೋತ್ರವನ್ನೇ ಮಾಡಬೇಕೆಂದು ಉಪದೇಶಿಸಲು) ತಕ್ಕ, ಪೆರುಮ್ ಪುಕೞ್-ಮಹಾಗುಣಪ್ರಸಿದ್ಧಿಯುಳ್ಳ, ಓರ್-ಅದ್ವಿತೀಯವಾದ, ಇವೈಪತ್ತುಮ್-ಈ ದಶಕವನ್ನು, ಶೊಲ್ಲವಲ್ಲಾರ್ಕ್ಕು-ಪಠನಮಾಡಬಲ್ಲವರಿಗೆ, ಶನ್ಮಮ್-ಜನ್ಮವು, ಇಲ್ಲೈ-ಇಲ್ಲ.

( ಸ-ಗಾ-ರ || )—

ನಿತ್ಯೋದಾರಗುಣೋಜ್ಜ್ವಲಂ ಮುರರಿಪುಂ ಸೂರೀನ್ದ್ರನಾಥಂ ಹರಿಂ
ಕೃಷ್ಣಂ ಸ್ತೋತುಮುದಾರಸದ್ಗುಣನಿಧಿಃ ಪ್ರಾಜ್ಞಶ್ಶಠಾರಿರ್ಮುನಿಃ |
ರಮ್ಯಂ ಶ್ರೀಕುರುಕೇಶ್ವರಶ್ಶುಭಗುಣಂ ಸಾಹಸ್ರಮೇವಾಕರೋ-
ತ್ತತ್ರೇದಂ ದಶಕಂ ಭುವೀಹ ಪಠತಾಂ ಜನ್ಮೈವ ನ ಸ್ಯಾನ್ನೃಣಾಮ್ ||

ತಾ|| (ಈ ದಶಕವನ್ನು ಪಠನಮಾಡುವವರಿಗೆ ಇತರ ಸ್ತೋತ್ರಜನ್ಯವಾದ ಜನ್ಮಸಂಬನ್ಧ ವಿಲ್ಲವೆಂದು ಹೇಳುತ್ತಾರೆ.) ಪರತ್ವಸೌಲಭ್ಯಗಳಿಗೆ ತಕ್ಕ ಮಹಾ ಗುಣಾತಿಶಯಪ್ರಸಿದ್ಧಿಯುಳ್ಳವನಾಗಿಯೂ, ನಿತ್ಯಸೂರೀಶ್ವರನಾಗಿಯೂ ಇರುವ ಶ್ರೀ ಕೃಷ್ಣನನ್ನು ಸ್ತುತಿಸಲು ಅನುಗುಣವಾದ ಜ್ಞಾನಾದಿಗುಣಪೂರ್ತಿಯುಳ್ಳ ಶ್ರೀ ಕುರುಕಾಪುರೀಶ್ವರರಾದ ನಮ್ಮಾೞ್ವಾರ್ರು ರಚಿಸಿದ ಛನ್ದೋಲಕ್ಷಣಾದಿ ಭರಿತವಾದ ಸಹಸ್ರಪದ್ಯಮಾಲೆಯೊಳು ದಿವ್ಯಮಾಹಾತ್ಮ್ಯವುಳ್ಳ ಉಚಿತತಮವಾದ ಈ ದಶಕವನ್ನು ಪಠನಮಾಡಬಲ್ಲವರಿಗೆ ಜನ್ಮಸಂಬನ್ಧವು ಇಲ್ಲವೆಂದು ಫಲವನ್ನು ಹೇಳಿರುತ್ತಾರೆ.

( ದ್ರ–ಉ–ಸಂ || )—

ಅನ್ಯಸ್ತ್ವನೇನ ವಿಷಯಾನಧಿಗನ್ತುಮಿಚ್ಛೂ-
ನಾಲೋಕ್ಯ ವಿಸ್ಮೃತನಿಜವ್ಯಸನೋ ದಯಾಳುಃ |
ತಸ್ಮಾನ್ನಿವಾರ್ಯ ಮನುಜಾರ್ನ ವಿಫಲಸ್ಸ ಶೌರೇ-
ರನ್ಯೇಷ್ವನರ್ಹಕರಣಂ ನವಮೇ ಸ್ವಮಾಖ್ಯತ್ ||

( ದ್ರ–ಉ–ತಾ–ರ || )—

ರಮ್ಯಸ್ಥಾನಾದಿಯೋಗಾದಮಿತವಿಭವತಸ್ಸತ್ಪಥಪ್ರಾಪಕತ್ವಾತ್
ಸಮ್ಯಕ್ಸಾಯುಜ್ಯದಾನಾದನಘವಿತರಣಾತ್ಸರ್ವಶೇಷಿತ್ವಚಿಹ್ನಾತ್ |
ಪ್ರಖ್ಯಾತಾಖ್ಯಾಸಹಸ್ರೈರವತರಣರಸೈರ್ಭುಕ್ತಿಮುಕ್ತ್ಯೈಕಮುಖ್ಯಾತ್
ತ್ರೈಲೋಕ್ಯೋತ್ಪಾದನಾಚ್ಚ ಸ್ತುತಿವಿಷಯತನುಂ ವ್ಯಾಹರನ್ನಿನ್ದಿತಾನ್ಯಃ ||

(ಈ ನವಮದಶಕದ ಸಾರಾಂಶ)

ಈ ಒಂಬತ್ತನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಪರಮೈಶ್ವರ್ಯ ಪರಿಪೂರ್ಣನಾಗಿಯೂ ಪರಮೋದಾರಸ್ವಭಾವನಾಗಿಯೂ ಇರುವ ಭಗವಂತನನ್ನು ಬಿಟ್ಟು ಕ್ಷುದ್ರರಾದ ಮಾನುಷರನ್ನು ಸ್ತೋತ್ರಮಾಡುವುದರಿಂದ ನಿಮಗೇನು ಫಲವೆಂದು ಕವಿಗಳಾದ ವಿದ್ವಾಂಸರನ್ನು ಕುರಿತು ಬೋಧಿಸುತ್ತ, ಅಂತಹ ಬೋಧನವು ನಿಷ್ಫಲವೆಂದು ತಿಳಿದು, ತಮ್ಮ ಅನನ್ಯಾರ್ಹವಾದ ದಿವ್ಯಕವಿತಾವೈಭವವು ಇತರ ಸ್ತುತಿರಹಿತವಾದುದೆಂದು ತಮ್ಮ ಭಾಗ್ಯವನ್ನು ಕೊಂಡಾಡಿ, ಈ ದಶಕದ ಪಠನದಿಂದಲೇ ಎಲ್ಲರಿಗೂ ಮೋಕ್ಷವುಂಟಾಗುವುದೆಂದು ಹೇಳಿರುತ್ತಾರೆ.

——o——

# ಶ್ರೀಃ

# ತೃತೀಯಶತಕದಲ್ಲಿ—ದಶಮದಶಕ.

## (ಶನ್ಮಮ್'ಪಲಪಲ—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ತಮಗೆ ಸರ್ವೇಶ್ವರಸ್ತುತಿಯಿಂದ ಸರ್ವವಿರೋಧಿನಿವೃತ್ತಿಪೂರ್ವಕವಾದ ಸರ್ವಾಭೀಷ್ಟ ಸಿದ್ಧಿಯಾಯಿತೆಂದು ಹೇಳುತ್ತಾರೆ.)

---

(೧) ಶನ್ಮಮ್ ಪಲಪಲಶೆಯ್ದು ವೆಳಿಪ್ಪಟ್ಟು ಶಙ್ಗುಡೊಣ್ಡು ಶಕ್ಕರಮ್ ವಿಲ್,
ಒನ್ಮೈಯುಡೈಯವುಲಕ್ಕೈ ಯೊಳ್ವಾಳ್ ತಣ್ಡುಕೊಣ್ಡು ಪುಳ್ಳೂರ್‌ನ್ದು, ಉಲಕಿಲ್
ವನ್ಮೈಯುಡೈಯ ವರಕ್ಕರಶುರರ್ಯೈ ಮಾಳ ಪ್ಪಡೈಪೊರುದ,
ನನ್ಮೈಯುಡೈಯವನ್ ಶೀರ್ ಪರವಪ್ಪೆಱ್ಱ ನಾನೋರ್ ಕುತ್ತೈವಿಲನೇ.

ಪ್ರ॥ ಪಲ–ದೇವಾದಿ ಜಾತಿಭೇದಗಳನ್ನೂ, ಪಲ–ಅವುಗಳಲ್ಲಿ ಪ್ರತಿಯೊಂದರಲ್ಲೂ ಅನೇಕ—ಅನ್ತರಭೇದಗಳನ್ನೂ—ಉಳ್ಳ, ಶನ್ಮಮ್–ನಾನಾ ಜನ್ಮಗಳನ್ನೂ, ಶೆಯ್ದು–(ಸಂಕಲ್ಪಮಾತ್ರದಿಂದಲ್ಲದೆ ಇತರ ಸಜಾತೀಯನಾಗಿಯೂ) ಸ್ವೀಕರಿಸಿ, ವೆಳಿಪ್ಪಟ್ಟು–ಪ್ರಾದುರ್ಭವಿಸಿ(ಕಣ್ಣಿಗೆಕಾಣುವಂತೆ ಅವತರಿಸಿ), ಶಙ್ಗುಡುಶಕ್ಕರಮ್–ಶಂಖಚಕ್ರಗಳನ್ನೂ,ವಿಲ್–ಶಾರ್ಙ್ಗವೆಂಬ ಧನುಸ್ಸನ್ನೂ,ಒನ್ಮೈಯುಡೈಯವುಲಕ್ಕೈ–ವಿರೋಧಿಧ್ವಂಸಕವಾದ ಮುಸಲಾಯುಧವನ್ನೂ, ಒಳ್‌ವಾಳ್–ಕೈಬಿಡದೆ (ಶತ್ರುನಾಶನಕ್ಕಾಗಿ) ಆಶ್ರಯಿಸಿರುವ ನನ್ದಕವೆಂಬ ಖಡ್ಗವನ್ನೂ, ತಣ್ಡು–ಕೌಮೋದಕಿಯೆಂಬ ಗದೆಯನ್ನೂ, ಕೊಣ್ಡು–ಸಾಧನಗಳಾಗಿ ಸ್ವೀಕರಿಸಿ, ಪುಳ್ ಊರ್‌ನ್ದು–ಗರುಡಾರೂಢನಾಗಿ, ಉಲಕಿಲ್–ಲೋಕದಲ್ಲಿ, ವನ್ಮೈಯುಡೈಯ–ಬಲಿಷ್ಠರಾದ, ಅರಕ್ಕರೈ ಅಶುರರ್ಯೈ–ರಾಕ್ಷಸರನ್ನೂ ಅಸುರರನ್ನೂ, ಮಾಳ–ನಾಶಪಡಿಸುವಂತೆ, ಪಡೈಪೊರುದ–ಸೇನೆಯೊಡನೆ ಯುದ್ಧಮಾಡಲು, ನನ್ಮೈಯುಡೈಯವನ್–ಸೌಜನ್ಯವುಳ್ಳವನ, ಶೀರ್–ಕಲ್ಯಾಣಗುಣಗಳನ್ನು, ಪರವಪ್ಪೆಱ್ಱ–ಸ್ತೋತ್ರಮಾಡಲರ್ಹನಾದ ನಾನ್–ನಾನು, ಓರ್‌ಕುತ್ತೈವಿಲನ್–ಒಂದು ಕೊರತೆಯೂ ಇಲ್ಲದವನು.

( ಸ-ಗಾ-ರ ॥ )—

ನಾನಾಜನ್ಮಸು ಜನ್ಮಭಾಗಿಹ ಭುವಿ ಪ್ರಾದುರ್ಭವನ್ಮಾಧವ-
ಶ್ಶಂಖಂ ಚಕ್ರಮಪಿ ಸ್ವಶಾರ್ಙ್ಗಮುಸಲೌ ಶ್ರೀನನ್ದಕಂ ತಾಂ ಗದಾಮ್।
ಬಿಭ್ರದ್ಗಾರುಡವಾಹನೋಽಸುರಗಣಾನ್ ರಕ್ಷೋಗಣಾನ್ಮರ್ದಯನ್
ಯುದ್ಧೇ ಭಾತಿ ಚ ಭಕ್ತವತ್ಸಲ ಇಮಂ ಸ್ತುತ್ವಾಽಸ್ಮಿ ಪೂರ್ಣಾಶಯಃ ॥

ತಾ॥ (ಅನೇಕಾವತಾರಗಳಲ್ಲಿ ಆಶ್ರಿತವಿರೋಧಿನಾಶಕನಾದ ಸ್ವಾಮಿಯನ್ನು ಸ್ತೋತ್ರಮಾಡುವ ನನಗೆ ಯಾವಕೊರತೆಯೂ ಇಲ್ಲವೆಂದು ಹೇಳುತ್ತಾರೆ.) ಅನೇಕ ಜಾತಿಭೇದಗಳುಳ್ಳ ನಾನಾವಿಧಾವತಾರಗಳನ್ನು ಮಾಡಿ ಪ್ರತ್ಯಕ್ಷನಾಗಿ ಶಂಖ ಚಕ್ರ ಶಾರ್ಙ್ಗ ಮುಸಲನನ್ದಕ ಕೌಮೋದಕೀಧರನಾಗಿ, ಗರುಡಾರೂಢನಾಗಿ ರಾಕ್ಷಸಾಸುರನಾಶಕನಾದ ಸ್ವಾಮಿಯ ದಿವ್ಯಕಲ್ಯಾಣಗುಣಗಳನ್ನು ಸ್ತೋತ್ರ ಮಾಡುವ ಭಾಗ್ಯವುಳ್ಳ ನಾನು ಒಂದು ಕೊರತೆಯೂ ಇಲ್ಲದವನಾಗಿದೇನೆ.

(೨) ಕುತ್ತ್ರವಿಲ್ ತಡಙ್ಗಡಲ್ ಕೋಳರವೇಱಿ ತ್ತನ್ ಕೋಲ
ಚ್ಚೆನ್ದಾಮರೈಕ್ಕಣ್,
ಉತ್ತ್ರವರ್ ಪೋಲ ವೋರ್ ಯೋಗುಪುಣರ್ನ್ದ ವೊಳಿಮಣಿ
ವಣ್ಣನ್ ಕಣ್ಣನ್,
ಶೆತ್ತ್ರಯಣಿಮೂಕ್ಕಡೈ ಪ್ಪುಳ್ಳೈ ಕ್ಕಡಾವಿ ಯಶುರರೈ
ಕ್ಕಾಯನ್ದವಮ್ಮಾನ್,
ನಿತ್ತ್ರಪ್ಪಕತ್ತೇತ್ತಿಯುಮ್ ಪಾಡಿಯುಮಾಡಿಯುಮ್
ಯಾನೊರು ಮುಟ್ಟಿಲನೇ.

ಪ್ರ॥ ಕುತ್ತ್ರವಿಲ್ - (ತನ್ನ ಸಂಶ್ಲೇಷದಿಂದ) ಪರಿಪೂರ್ಣವಾದ, ತಡಮ್ ಕಡಲ್-ವಿಸ್ತೀರ್ಣವಾದ ಸಮುದ್ರದಲ್ಲಿ, ಕೋಳ್ ಅರವು-ಬಲಿಷ್ಠನಾದ ಆದಿಶೇಷನ ಮೇಲೆ, ಏಱಿ-ಹತ್ತಿ, ತನ್ ಕೋಲಮ್-ತನ್ನ ಈಶ್ವರತ್ವಸೂಚಕವಾದ ಸೌನ್ದರ್ಯವುಳ್ಳ, ಶೆನ್ದಾಮರೈಕ್ಕಣ್-ಕೆಂದಾವರೆಯಂತಿರುವ ಕಣ್ಣುಗಳು, ಉತ್ತ್ರವರ್ ಪೋಲ-ನಿದ್ರೆ ಮಾಡುತ್ತಿರುವಂತೆ, ಓರ್ ಯೋಗುಪುಣರ್ನ್ದ - ಅದ್ವಿತೀಯವಾದ (ಜಗದ್ರಕ್ಷಣ ಚಿನ್ತಾರೂಪವಾದ) ಧ್ಯಾನಯೋಗವನ್ನು ಹೊಂದಿರುವ, ಮಣಿ ಒಳಿವಣ್ಣನ್- ಮಾಣಿಕ್ಯದಂತೆ ಪ್ರಕಾಶಿಸುವ ದೇಹಕಾನ್ತಿಯುಳ್ಳವನಾದ, ಕಣ್ಣನ್-ಕೃಷ್ಣನಾದ, ಶೆತ್ತ್ರ ಅಣಿ-ಶತ್ರುನಾಶಕಲಾಂಛನವನ್ನೇ ಆಭರಣವಾಗಿಯುಳ್ಳ, ಮೂಕ್ಕಡೈ-

ಕೊಕ್ಕು (ಮೂಗು) ಉಳ್ಳ, ಪುಳ್ಳೈ–ಗರುಡನನ್ನು, ಕಡಾವಿ-ನಡೆಸಿ, ಅಶುರರ್ಕ್ಕಾಯ್‌ನ್ದ–ಅಸುರರನ್ನು ನಾಶಪಡಿಸಿದ, ಅಮ್ಮಾ–ಸರ್ವೇಶ್ವರನ, ನಿತ್ತ್ಯವುಕಳ್–ಪರಿಪೂರ್ಣವಾದ ವಿಜಯಕೀರ್ತಿಯನ್ನು, ಏತ್ತಿಯುಮ್–ಸ್ತೋತ್ರಮಾಡಿಯೂ, ಪಾಡಿಯುಮ್–ಹಾಡಿಯೂ, ಆಡಿಯುಮ್–ನರ್ತನಮಾಡಿಯೂ, ಯಾ–ನಾನು, ಒರುಮುಟ್ಟು ಇಲ–ಒಂದು ವಿಚ್ಛೇದವೂ (ವಿಘ್ನವೂ) ಇಲ್ಲದವನು.

( ಸ–ಗಾ–ರ ॥ )—

**ಪೂರ್ಣಾಬ್ಧೌ ಧಿತಲೇಽಸ್ತಿ ಶೇಷಶಯನಃ ಪದ್ಮಾಕ್ಷರುಚಿಸ್ಸುಂದರ–**

**ಶ್ರೀವಾನ್ ಯೋಗಪತಿರ್ಹರಿರ್ಮಣಿನಿಭಃ ಕೃಷ್ಣಶ್ಚ ತಾರ್ಕ್ಷ್ಯಧ್ವಜಃ ।**

**ಪ್ರಧ್ವಂಸ್ಯಾಸುರವರ್ಗಮುತ್ತಮಗುಣಸ್ಸರ್ವೇಶ್ವರೋ ಭಾತ್ಯಯಂ !**

**ಸ್ತುತ್ವೈನಂ ಪರಿಗಾನನೃತ್ತಸಹಿತಃ ಪೂರ್ಣೋಽಸ್ಮ್ಯಹಂ ಸನ್ತತಮ್ ॥**

ತಾ॥ (ಕ್ಷೀರಾಬ್ಧಿಶಾಯಿಯ ಗುಣಗಳನ್ನು ಸ್ತೋತ್ರಮಾಡುವ ಭಾಗ್ಯಮಳ್ಳ ನನಗೆ ಯಾವವಿಚ್ಛೇದವೂ ಇಲ್ಲವೆಂದು ಹೇಳುತ್ತಾರೆ.) ಕ್ಷೀರಾಬ್ಧಿಯಲ್ಲಿ ಆದಿಶೇಷನ ಮೇಲೆ ಹತ್ತಿ ರಮ್ಯಪದ್ಮಾಕ್ಷನಾಗಿ ಯೋಗನಿದ್ರೆಯನ್ನುಮಾಡುವ ನೀಲಮಣಿವರ್ಣನಾದ, ಶ್ರೀಕೃಷ್ಣರೂಪಿಯಾದ, ಗರುಡಾರೂಢನಾಗಿ ಅಸುರನಾಶಕನಾದ ಸರ್ವೇಶ್ವರನ ದಿವ್ಯವಿಜಯಕೀರ್ತಿಯನ್ನು ಸ್ತುತಿಸಿ ಗಾನ ನರ್ತನಗಳಂ ಮಾಡುವ ನಾನು ಒಂದುವಿಘ್ನವೂ ಇಲ್ಲದವನಾಗಿದೇನೆ.

(೩) ಮುಟ್ಟಿಲ್ ಪಲ್‌ಪೋಕತೊರು ತನಿನಾಯಕನ್

ಮೂವುಲಕುಕ್ಕುರಿಯ,

ಕಟ್ಟಿಯೈ ತ್ತೇನೈ ಯಮುದೈ ನನ್ಪಾಲೈ

ಕ್ಕನಿಯೈ ಕ್ಕರುಮ್ಬುತನ್ನೈ,

ಮಟ್ಟವಿಳ್ ತಣ್ಣನ್ತುೞಾಯ್‌ಮುಡಿಯಾನೈ

ವಣಙ್ಗಿ ಯವನ್‌ತಿರುತ್ತು

ಪ್ಪಟ್ಟಪಿನ್ನೈ। ಇಱೈಯಾಕಿಲುಮ್ ಯಾನೆನ್‌ಮನತ್ತು

ಪ್ಪರಿವಿಲನೇ.

ಪ್ರ॥ ಮೂವುಲಕುಕ್ಕು ಉರಿಯ – ತ್ರಿವಿಧ ಚೇತನಾಚೇತನಗಳಿಗೆ ಅಸಾಧಾರಣ ಭೂತನಾಗಿಯೂ, ಮುಟ್ಟು ಇಲ್–ಅವಿಚ್ಛಿನ್ನವಾಗಿ, ಪಲ್‌ಪೋಕತ್ತು–

15

ಬಹುವಿಧ ಭೋಗಸಮೃದ್ಧಿಯುಳ್ಳ, ಒರು-ಅದ್ವಿತೀಯನಾದ, ತನಿನಾಯಕರ್ – ಪ್ರಧಾನನಾಯಕನಾಗಿಯೂ, (ಇರುವ) ನಲ್‌ಕಟ್ಟಿಯೈ-ಅನ್ತರ್ಬಹಿಶ್ಚರಸಘನವಾದ ಕಲ್ಲುಸಕ್ಕರೆಯಂತೆ ಇರುವವನನ್ನೂ, ನಲ್‌ತೇನೈ – ಸರ್ವರಸಸಮವಾಯವಾದ ಜೇನುತುಪ್ಪದಂತೆ ಇರುವವನನ್ನೂ, ನಲ್ ಅಮುದೈ–ನಿತ್ಯಭೋಗ್ಯವಾದ ಅಮೃತ ದಂತೆ ಇರುವವನನ್ನೂ, ನಲ್‌ಪಾಲೈ–ಸ್ವಾಭಾವಿಕರಸವಾದ ಒಳ್ಳೆಯ ಹಾಲಿನಂತೆ ಇರುವವನನ್ನೂ, ನಲ್‌ಕನಿಯೈ–ಭಕ್ಷಿಸುವುದಕ್ಕೆ ಸಿದ್ಧವಾಗಿರುವ ಪಕ್ವಫಲದಂತೆ ಇರುವವನನ್ನೂ, ನಲ್‌ಕರುಮ್ಬುತನ್ನೈ–ಪರ್ವಗಳಲ್ಲಿ ಕ್ರಮೇಣ ಭೋಗ್ಯತಾತಿಶಯ ವುಳ್ಳ ಕಬ್ಬಿನಂತೆ ಇರುವವನನ್ನೂ, (ಈಪ್ರಕಾರ ಸರ್ವವಿಧ ಭೋಗ್ಯತಾತಿಶಯ ವುಳ್ಳ), ಮಟ್ಟು–ಮಧುಸ್ಯನ್ದಿಯಾಗಿ, ಅವಿಳ್‌ – ವಿಕಸಿತವಾಗಿ, ತಣ್–ಶೀತಳವಾಗಿ, ಅಮ್–ರಮಣೀಯವಾದ, ತುೞಾಯ್–ತುಳಸಿಯಿಂದ ಅಲಂಕೃತವಾದ, ಮುಡಿ ಯಾನೈ – ಕಿರೀಟವುಳ್ಳವನನ್ನು, ವಣಙ್ಗಿ–ನಮಸ್ಕರಿಸಿ, ಅವರ್‌ತಿಱತ್ತು–ಅವನ ವಿಷಯದಲ್ಲಿ, ಪಟ್ಟಪಿನ್ನೈ–ಅನನ್ಯಾರ್ಹವಾಗಿ ಪ್ರವೇಶಿಸಿದಮೇಲೆ, ಯಾನ್–ನಾನು, ಇತ್ತನೈಯಾಕಿಲುಮ್–ಸ್ವಲ್ಪವಾದರೂ, ಪರಿವು–ಮನೋವ್ಯಥೆಯನ್ನು, ಎನ್ನಕತ್ತು –ನನ್ನ ಮನಸ್ಸಿನಲ್ಲಿ, ಇಲನ್–ಉಳ್ಳವನಲ್ಲ.

( ಸ–ಗಾ–ರ || —

ತ್ರೈಲೋಕ್ಯಾಧಿಪತಿಂ ಚ ಭೋಗಭರಿತಂ ಸರ್ವೇಶ್ವರಂ ಶ್ರೀನಿಧಿಂ
ಮಾಧುರ್ಯಾಬ್ಧಿರಸಂ ಘನಂ ಮಧುರಸಂ ಕ್ಷೀರಂ ಫಲಂ ಚೋತ್ತಮಮ್ |
ದಿವ್ಯಂ ಚಾಮೃತಮಿಕ್ಷುಮೇವ ತುಲಸೀಭಾಸ್ವತ್ಕಿರೀಟಂ ಹರಿಂ
ನತ್ವಾ ತತ್ಪ್ರವಣಾಶಯೋಽನಿಶಮಹಂ! ಚಿತ್ತಾರ್ತಿಲೇಶೋ ನ ಮೇ ||

ತಾ|| (ಸರ್ವೇಶ್ವರನ ಸೇವಾಸಾಮ್ರಾಜ್ಯವಂ ಪಡೆದ ನನಗೆ ಒಂದು ಮನೋ ವ್ಯಥೆಯೂ ಇಲ್ಲವೆಂದು ಹೇಳುತ್ತಾರೆ.) ತ್ರಿಲೋಕಾಧಿಪತಿಯಾಗಿಯೂ, ಅವಿಚ್ಛಿನ್ನ ಭೋಗಸಾಮ್ರಾಜ್ಯವುಳ್ಳವನಾಗಿಯೂ, ಕಲ್ಲುಸಕ್ಕರೆಯಂತೆಯೂ ಜೇನುತುಪ್ಪದಂ ತೆಯೂ ಅಮೃತದಂತೆಯೂ ಕ್ಷೀರದಂತೆಯೂ ಪಕ್ವಫಲದಂತೆಯೂ ಕಬ್ಬಿನಂ ತೆಯೂ ಭೋಗ್ಯತಮನಾಗಿ ದಿವ್ಯತುಳಸೀಮಾಲಾಲಂಕೃತಕಿರೀಟಧಾರಿಯಾಗಿಯೂ ಇರುವ ಸ್ವಾಮಿಯನ್ನು ನಮಸ್ಕರಿಸಿ ಅವನನ್ನೇ ಆಶ್ರಯಿಸಿರುವ ನನಗೆ ಸ್ವಲ್ಪವೂ ಮನೋವ್ಯಥೆಯಿಲ್ಲ.

(೪) ಪರಿವಿನ್ರಿ ವಾಣನ್ನೈ ಕ್ಕಾತ್ತುಮೆನ್ರನ್ರು ಪಡೈಯೊಡುಮ್
ವನ್ದೆದಿರ್ನ್ದ
ತಿರಿಪುರಮ್ ಶೆಱ್ಱವನುಮ್ ಮಕನುಮ್ ಪಿನ್ನುಮಙ್ಗಿ
ಯುಮ್ ಪೋರ್ತುಲೈಯ,
ಪ್ಪೊರುಶಿಱೈ ಪ್ಪುಳ್ಳೈ ಕ್ಕಡಾವಿಯ ಮಾಯನ್ನೈ ಪ್ಪೊಱ್ಚಕ್ಕರ-
ತ್ತರಿಯಿನೈ, ಅಚ್ಚುತನೈ ಪ್ಪಱ್ಱಿ ಯಾನಿಱೈಯೇನು
ಮಿಡರಿಲನೇ.

ಪ್ರ॥ ಅನ್ರು-(ಅನಿರುದ್ಧನಿಗೋಸ್ಕರ ತಾನೇ ಕೊಂಟ)ಅಂದು, ವಾಣನ್ನೈ-ಬಾಣಾಸುರನನ್ನು, ಪರಿವು ಇನ್ರಿ-ದುಃಖವಿಲ್ಲದಂತೆ, ಕಾತ್ತುಮ್-ರಕ್ಷಿಸುವೆವು, ಎನ್ರು-ಎಂದು, ಪಡೈಯೊಡುಮ್-ಆಯುಧಗಳೊಡನೆ, ವನ್ದು ಎದಿರ್ನ್ದ-ಬಂದು ಎದುರಿಗೆ ನಿಂತ, ತಿರಿಪುರಮ್ ಶೆಱ್ಱವನುಮ್-ತ್ರಿಪುರಾನ್ತಕನಾದ ರುದ್ರನೂ ಕೂಡ, ಮಕನುಮ್-ಅವನ ಮಗನಾದ (ದೇವಸೇನಾಪತಿಯಾದ) ಸುಬ್ರಹ್ಮಣ್ಯನೂ, ಪಿನ್ನುಮ್-ಅದೂ ಅಲ್ಲದೆ, ಅಙ್ಗಿಯುಮ್-ಅಗ್ನಿಯೂ, ಪೋರ್ತುಲೈಯ-(ಇನ್ನು ಮೇಲೆ ಯಾವಯುದ್ಧಕ್ಕೂ ನಾವು ಪ್ರವೇಶಿಸುವುದಿಲ್ಲವೆಂದು) ಯುದ್ಧದಿಂದ ನಿವೃತ್ತರಾಗುವಂತೆ, ಪೊರು-ಯುದ್ಧಮಾಡುವ, ಶಿಱೈ-ರೆಕ್ಕೆಗಳುಳ್ಳ, ಪುಳ್ಳೈ-ಗರುಡನನ್ನು, ಕಡಾವಿಯ-ಹತ್ತಿನಡೆಸಿದ, ಮಾಯನೈ-ಆಶ್ಚರ್ಯಕರಚೇಷ್ಟಿತನನ್ನು, ಆಯನೈ-ಗೋಪವೇಷವನ್ನು ಹೊಂದಿದ ಕೃಷ್ಣನನ್ನು, ಪೊಱ್ ಶಕ್ಕರತ್ತು-ರಮ್ಯವಾದ ಚಕ್ರವನ್ನು ಧರಿಸಿ, ಅರಿಯಿನೈ-ಶತ್ರುನಾಶಕನಾಗಿರುವ, ಅಚ್ಚುತನೈ-ಆಶ್ರಿತರಕ್ಷಕನನ್ನು, ಪಱ್ಱಿ-ಹೊಂದಿ, ಯಾನ್-ನಾನು, ಇಱೈಯೇನುಮ್-ಸ್ವಲ್ಪವೂ, ಇಡರ್ ಇಲನ್-ದುಃಖವಿಲ್ಲದವನು

( ಸ-ಗಾ-ರ ॥ )—

ರಕ್ಷಾಮ್ಯೇವ ಭವನ್ತಮಾಶ್ರಿತಮಿತಿ ಸ್ವೀಕೃತಂ ಪ್ರತಿಶ್ರುತ್ಯ ತಂ
ಬಾಣಂ ಚ ತ್ರಿಪುರಾನ್ತಕಸ್ತು ಸಮರೇ ಸೇನಾಸಮೇತಶ್ಶಿವಃ ।
ಸೂನುಸ್ತಸ್ಯ ತಥಾಽನಲೋಽಪಿ ಚ ಜಿತಾಃ ಪಕ್ಷೇಣ ಯಸ್ಯಾಪ್ಯಮುಂ
ತಾರ್ಕ್ಷ್ಯಂ ಚಾಪ್ಯಧಿರುಹ್ಯ ಚಕ್ರಧರಮೇವಾಹಂ ಶ್ರಿತೋ ನಿರ್ಭಯಃ ॥

ತಾ॥ (ವಿರೋಧಿನಿವರ್ತಕನಾದ ಆಶ್ರಿತರಕ್ಷಕನನ್ನು ಆಶ್ರಯಿಸಿದ ನನಗೆ ಒಂದು ದುಃಖಭೀತಿಯೂ ಇಲ್ಲವೆಂದು ಹೇಳುತ್ತಾರೆ.) ಬಾಣಾಸುರನನ್ನು ದುಃಖವಿಲ್ಲದಂತೆ ರಕ್ಷಿಸುವೆನೆಂದು ಆಯುಧಧಾರಿಯಾಗಿ ಬಂದುನಿಂತ ತ್ರಿಪುರಾನ್ತಕನಾದ ರುದ್ರನೂ ಅವನ ಮಗನಾದ ಸುಬ್ರಹ್ಮಣ್ಯನೂ ಅಗ್ನಿಯೂ ಯುದ್ಧದಿಂದ ನಿವೃತ್ತರಾಗುವಂತೆ ಗರುಡಾರೂಢನಾಗಿ ಅತ್ಯದ್ಭುತವಾದ ಮಾಯಾಚೇಷ್ಟಿತಗಳನ್ನು ನಡೆಸಿದ ಶ್ರೀಕೃಷ್ಣರೂಪಿಯಾದ, ಮತ್ತು ಚಕ್ರಪಾಣಿಯಾಗಿ ಶತ್ರುನಾಶಕನಾದ ಅಚ್ಯುತನನ್ನು ಆಶ್ರಯಿಸಿ ನಾನು ಸ್ವಲ್ಪವೂ ದುಃಖವಿಲ್ಲದವನಾಗಿದೇನೆ.

(೫) ಇಡರಿನ್ಱಿಯೇ ಯೊರುನಾಳೊರುಪೋೞ್ದಿಲೆಲ್ಲಾವುಲಕುಮ್ ಕಡಿಯ
ಪ್ಪಡರ್ ಪುಕೞ್ ಪಾರ್ತ್ತನುಮ್ ವೈದಿಕನುಮುಡನೇಱ
ತ್ತಿಣ್ ತೇರ್ ಕಡವಿ,
ಶುಡರೊಳಿಯಾಯ್ ನಿನ್ಱ ತನ್ನುಡೈಚ್ಚೋದಿಯಿಲ್
ವೈದಿಕನ್ ಪಿಳ್ಳೈಕಳೈ,
ಉಡಲೊಡುಮ್ ಕೊಣ್ಡು ಕೊಡುತ್ತವನೈಪ್ಪಱ್ಱಿ,
ಯೊನ್ಱುಮ್ ತುಯರಿಲನೇ.

ಪ್ರ॥ ಇಡರ್ ಇನ್ಱಿಯೇ-ಆಯಾಸವಿಲ್ಲದೆ, ಒರುನಾಳ್-ಒಂದುದಿನ, ಒರು ಪೋೞ್ದಿಲ್-ಒಂದುಸಮಯದಲ್ಲಿ, ಎಲ್ಲಾ ಉಲಕುಮ್ - ಸಕಲಲೋಕಗಳನ್ನು, ಕಡಿಯ- ಅತಿಕ್ರಮಿಸುವಂತೆ, ಪಡರ್ ಪುಕೞ್ - ವಿಸ್ತೀರ್ಣ ಯಶಸ್ಸುಳ್ಳ, ಪಾರ್ತ್ತನುಮ್-ಪಾರ್ಥನೂ, ವೈದಿಕನುಮ್-ವೈದಿಕಬ್ರಾಹ್ಮಣನೂ, ಉಡನ್ ಏಱ-ಕೂಡಿ ತನ್ನೊಡನೆ ಹತ್ತಿಬರುವಂತೆ, ತಿಣ್ ತೇರ್-ದೃಢವಾದ ರಥವನ್ನು, ಕಡವಿ-ನಡೆಸಿ, ಶುಡರ್ ಒಳಿಯಾಯ್ ನಿನ್ಱ-ದಿವ್ಯತೇಜೋನಿಧಿಯಾಗಿ ನಿಂತ, ತನ್ನುಡೈಚ್ಚೋದಿಯಿಲ್-ತನ್ನ "ಪರಂಜ್ಯೋತಿಃ" ಎಂಬ ಸ್ಥಾನದಲ್ಲಿ, ವೈದಿಕನ್ ಪಿಳ್ಳೈಕಳೈ-ಆ ವೈದಿಕನ ಪುತ್ರರು ನಾಲ್ಕುಮಂದಿಯನ್ನೂ, ಉಡಲೊಡುಮ್-ಆ ಶರೀರದೊಡನೆ, ಕೊಣ್ಡು ಕೊಡುತ್ತವನೈ-ತಂದುಕೊಟ್ಟವನನ್ನು, ಪಱ್ಱಿ-ಆಶ್ರಯಿಸಿ, ಒನ್ಱುಮ್-ಒಂದುಪ್ರಕಾರದಲ್ಲೂ, ತುಯರ್ ಇಲನ್-ನಾನು ದುಃಖವಿಲ್ಲದವನು.

( ಸ-ಗಾ-ರ || )—

ದುಃಖಾನಾಂ ಶಮನಾಯ ಹನ್ತ! ಜಗತಾಂ ಪಾರ್ಥಸ್ಯ ಕೃಷ್ಣಾಶ್ರಯ-
ಸ್ಸುಖ್ಯಾತಸ್ಸ ಚ ವೈದಿಕೋ ನಿಜರಥೇ ದಿವ್ಯೇ ಸ್ವಯಂ ರೋಪಿತೌ |
ಯೇನಾಸೌ ಪರಮೇ ಚ ಧಾಮ್ನಿ ಹಿ ವಿಶಂಸ್ತಸ್ಯಾತ್ಮಜಾನ್ ವೈದಿಕ-
ಸ್ಯಾನೀಯಾರ್ಪಿತವಾನ್ ಸದೇಹಮಿಮಮಾಶ್ರಿತ್ಯಾಸ್ಮಿ ನಿರ್ದುಃಖಭಾಕ್ ||

ತಾ|| (ಮೃತರಾದ ವೈದಿಕಪುತ್ರರನ್ನು ತಂದುಕೊಟ್ಟ ಸ್ವಾಮಿಯನ್ನು ಆಶ್ರಯಿಸಿದ ನನಗೆ ಯಾವದುಃಖವೂ ಇಲ್ಲವೆಂದು ಹೇಳುತ್ತಾರೆ.) ಒಂದಾನೊಂದು ದಿನ ಸಕಲಲೋಕಗಳನ್ನೂ ದಾಟುವಂತೆ ರಥದಲ್ಲಿ ಅರ್ಜುನನನ್ನೂ ವೈದಿಕನನ್ನೂ ತನ್ನೊಡನೆ ಕರೆದುಕೊಂಡುಹೋಗಿ ತನ್ನ ಪರಜ್ಯೋತಿಸ್ಸ್ಥಾನದಲ್ಲಿದ್ದ ವೈದಿಕ ಪುತ್ರರು ನಾಲ್ವರನ್ನೂ ಸಶರೀರವಾಗಿ ತಂದುಕೊಟ್ಟ ಸ್ವಾಮಿಯನ್ನು ಆಶ್ರಯಿಸಿರುವ ನನಗೆ ಯಾವದುಃಖವೂ ಇಲ್ಲ.

(೭) ತುಯರಿಲ್ ಶುಡರೊಳಿ ತನ್ನುಡೈಚ್ಚೋದಿ ನಿನ್ಱವಣ್ಣಮ್
ನಿಱ್ಕವೇ,
ತುಯರಿಲ್ ಮಲಿಯುಮ್ ಮನಿಶರ್ ಪಿಱವಿಯಿಲ್,
ತೋನ್ಱಿ ಕ್ಕಣ್ಕಾಣ ವನ್ದು,
ತುಯರಙ್ಗಳ್ ಶೆಯ್ದು ತನ್ ತೆಯ್ವನಿಲೈ ಉಲಕಿಲ್
ಪುಕ ಉಯ್ಕ್ಕುಮಮ್ಮಾನ್,
ತುಯರಮಿಲ್ ಶೀರ್ ಕಣ್ಣನ್ ಮಾಯನ್ ಪುಕಳ್ ತುಱ್ಱ
ಯಾನೋರ್ ತುನ್ಬಮಿಲನೇ.

ಪ್ರ|| ತುಯರ್ ಇಲ್-ದುಃಖಗನ್ಧವೂ ಇಲ್ಲದ, ಶುಡರೊಳಿ - ಅತ್ಯುಜ್ಜ್ವಲ ತೇಜೋರೂಪವಾದ, ತನ್ನುಡೈಚ್ಚೋದಿ-ಪರಜ್ಯೋತಿಸ್ಸೆಂಬ ದಿವ್ಯವಿಗ್ರಹವು, ನಿನ್ಱ ವಣ್ಣಮೇ-ಪೂರ್ವದಲ್ಲಿದ್ದಂತೆಯೇ, ನಿಱ್ಕವೇ-ನಿಲ್ಲಲು, (ದೀಪಾದ್ದೀಪಪ್ರವೃತ್ತಿ ಯಂತೆ-ತತ್ಸಜಾತೀಯವಾದ ಅಪ್ರಾಕೃತವಿಗ್ರಹದೊಡನೆ), ತುಯರಿಲ್ - ದುಃಖ ದಲ್ಲಿ, ಮಲಿಯುಮ್-ಮಗ್ನವಾದ, ಮನಿಶರ್ ಪಿಱವಿಯಿಲ್-ಮಾನುಷ ಜನ್ಮದಲ್ಲಿ, ತೋನ್ಱಿ-ಆವಿರ್ಭವಿಸಿ, ಕಣ್ ಕಾಣವನ್ದು - ಪ್ರತ್ಯಕ್ಷವಾಗಿ ಬಂದು, ತುಯರಙ್ಗಳ್ ಶೆಯ್ದು-ದೌತ್ಯಸಾರಥ್ಯಾದಿ ಚೇಷ್ಟಿತಗಳನ್ನೆಲ್ಲಾ ಮಾಡಿ (ಶತ್ರುನಾಶಕೃತ್ಯಗಳನ್ನು ಮಾಡಿ), ತನ್ ತೆಯ್ವನಿಲೈ-ತನ್ನ ದಿವ್ಯವಾದ ಪರತ್ವಸ್ಥಿತಿಯನ್ನು, ಉಲಕಿಲ್-ಈ

ಲೋಕದಲ್ಲೂ, ಪುಕ ಉಯ್ಕ್ಕುಮ್ – ನಿಲ್ಲುವಂತೆ ಮಾಡುವ ಶಕ್ತಿಯುಳ್ಳ, ಅಮ್ಮಾನ್–ಸ್ವಾಮಿಯಾದ, ತುಯರಮಿಲ್ ಶೀರ್ – ಹೇಯಪ್ರತ್ಯನೀಕ ಕಲ್ಯಾಣ ಗುಣಾಶ್ರಯನಾದ, ಕಣ್ಣನ್ ಮಾಯನ್ – ಕೃಷ್ಣರೂಪಿಯಾದ ಆಶ್ಚರ್ಯಚೇಷ್ಟಿತನ, ಪುಕಳ್ ತುಟ್ರ್–ಕೀರ್ತಿಯನ್ನು ಅನುಭವಿಸಿದ, ಯಾನ್–ನಾನು ಓರ್ ತುನ್ಬಮಿಲನ್– ಒಂದುದುಃಖವೂ ಇಲ್ಲದವನು.

( ಸ–ಗಾ–ರ || )—

ಪೂರ್ಣೇ ಚೋಜ್ಜ್ವಲತೇಜಸಿ ಸ್ವಮಹಿಮಸ್ಥೇಪ್ಯಾ ನಿಜೇ ಭಾಸ್ವತಿ
ಪ್ರಾದುರ್ಭೂಯ ಚ ಮಾನುಷೇ ವ್ಯಸನಿನಿ ಪ್ರತ್ಯಕ್ಷ ಏವ ಪ್ರಭುಃ |
ನಿರ್ದೋಷೋಽದ್ಭುತಕೃತ್ಯಕೃತ್ಕಿಲ ಮಹಾಮಾಹಾತ್ಮ್ಯತೋಽಭೂಚ್ಚತಂ
ಕೃಷ್ಣಂ ಮಾಯಿನಮಾಶ್ರಿತೋಽಸ್ಮಿ ಸತತಂ! ಸ್ಯಾದ್ದುಃಖಗನ್ಧೋ ನ ಮೇ||

ತಾ|| (ಇತರ ಸಜಾತೀಯನಾಗಿ ಅವತರಿಸಿದ ಕೃಷ್ಣನ ಗುಣಗಳನ್ನು ಅನು ಭವಿಸುವ ನನಗೆ ಯಾವ ದುಃಖಗನ್ಧವೂ ಇಲ್ಲವೆಂದು ಹೇಳುತ್ತಾರೆ.) ಅಪ್ರಾಕೃತ ವಾದ ಅತ್ಯುಜ್ಜ್ವಲ ದಿವ್ಯತೇಜೋಮಯ ವಿಗ್ರಹವುಳ್ಳ ಸ್ವಾಮಿಯು ದುಃಖಾ ರ್ಣವ ಮಗ್ನವಾದ ಮಾನುಷಜನ್ಮದಲ್ಲಿ ಪ್ರತ್ಯಕ್ಷವಾಗಿ ಬಂದು ಅತಿಮಾನುಷಚೇಷ್ಟಿತ ಗಳನ್ನು ಮಾಡಿ ತನ್ನ ಪರತ್ವವನ್ನು ಈ ಲೋಕದಲ್ಲೂ ಪ್ರಕಾಶಪಡಿಸಿ ದೋಷ ರಹಿತನಾಗಿ ಸಕಲಕಲ್ಯಾಣಗುಣಾಕರನಾದ ಶ್ರೀಕೃಷ್ಣರೂಪಿಯಾಗಿ ಮಾಯಾ ಚೇಷ್ಟಿತನಾಗಿ ಪ್ರಖ್ಯಾತನಾಗಿರುವುದರಿಂದ ಇವನ ದಿವ್ಯಕೀರ್ತಿಯನ್ನು ಅನು ಭವಿಸಿದ ನಾನು ದುಃಖಗನ್ಧವೂ ಇಲ್ಲದವನು.

(೭) ತುನ್ಬಮುಮಿನ್ಬಮುಮಾಕಿಯ
ಶೆಯ್ವಿನೈಯಾಯುಲಕಙ್ಗಳುಮಾಯ್
ಇನ್ಬಮಿಲ್ ವೆನ್ನರಕಾಕಿ ಯಿನಿಯ
ನಲ್ವಾನ್ಶುವರ್ಕ್ಕಙ್ಗಳುಮಾಯ್,
ಮನ್ಬಲ್ಲುಯಿರ್ಕಳುಮಾಕಿ, ಪ್ಪಲಪಲ
ಮಾಯಮಯಕ್ಕುಕ್ಕಳಾಲ್,
ಇನ್ಬುಱುಮಿವ್ವಿಳೈಯಾಟ್ಟುಡೈಯಾನ್ನೈ
ಪ್ಪೆಟ್ರ್ರೇದುಮಲ್ಲಲಿಲನೇ.
೩

ಪ್ರ|| ತುನ್ಬಮುಮ್ – ದುಃಖವೂ, ಇನ್ಬಮುಮ್ – ಸುಖವೂ, ಆಕಿಯ–ಉಂಟಾಗುವಂತೆ, ಶೆಯ್-ಮಾಡಲ್ಪಟ್ಟ, ವಿನ್ನೈ-(ಪಾಪಪುಣ್ಯರೂಪವಾದ) ಕರ್ಮಗಳಿಗೆ ಆಯ್-ನಿರ್ವಾಹಕನಾಗಿ, ಉಲಕಙ್ಗಳುಮ್ ಆಯ್–ಭೂಲೋಕಾದಿ ಪ್ರದೇಶಗಳಿಗೂ ನಿರ್ವಾಹಕನಾಗಿ, ಇನ್ಬಮಿಲ್-ಸುಖಗನ್ಧವೂ ಇಲ್ಲದ, ವೆಮ್‌ನರಕು ಆಕಿ-ಘೋರವಾದ ನರಕಕ್ಕೂ ನಿರ್ವಾಹಕನಾಗಿ, ಇನಿಯ ನಲ್‌ವಾ – ಭೋಗ್ಯವಸ್ತು ಪರಿಪೂರ್ಣವಾಗಿ ಶ್ಲಾಘ್ಯವಾಗಿಯೂ ದಿವ್ಯವಾಗಿಯೂ ಇರುವ, ಶುವರ್‌ಕ್ಕಙ್ಗಳುಮ್ ಆಯ್ – ಸ್ವರ್ಗಾದಿ ಪ್ರದೇಶಗಳಿಗೂ ನಿರ್ವಾಹಕನಾಗಿ, ಮರ್ಪಲ್ ಉಯಿರ್‌ಕಳುಮ್ ಆಯ್-ನಿತ್ಯರಾಗಿಯೂ ಅಸಂಖ್ಯಾತರಾಗಿಯೂ ಇರುವ ಪ್ರಾಣಿಗಳಿಗೂ ನಿರ್ವಾಹಕನಾಗಿ, ಪಲಪಲ – ಅಸಂಖ್ಯೇಯವಾದ, ಮಾಯಮಯಕ್ಕುಕ್ಕಳಾಲ್–ಚೇತನರ ಮೋಹವಿಕಾರಗಳಿಂದ, ಇನ್ಬುಱುಮ್ – ರಸಾವಹವಾದ, ಇವ್ವಿಳೈಯಾಟ್ಟುಡೈಯಾನೈ - ಈ ಲೀಲಾವಿಭೂತಿಯಲ್ಲಿ ಹೀಗೆ ಲೀಲೆಯುಳ್ಳವನನ್ನು, ಪೆಱ್ಱು–ಚೆನ್ನಾಗಿ ತಿಳಿದು ಆಶ್ರಯಿಸಿ, ಏದುಮ್–ಸ್ವಲ್ಪವೂ, ಅಲ್ಲಲ್-ಆಯಾಸವು, ಇಲನ್–ಇಲ್ಲದವನಾಗಿದೇನೆ.

( ಸ–ಗಾ–ರ || )—

**ಸಂಸಾರಂ ಸುಖದುಃಖಮಿಶ್ರಮಖಿಲಂ ವಿಶ್ವಂ ಚ ತನ್ನಾರಕಂ**
**ನಾನಾದುಃಖಮಯಂ ಚ ನಾಕಮಪಿ ತಂ ಭೋಗ್ಯಂ ಸ್ವಯಂ ವ್ಯಾಪ್ಯ ಯಃ|**
**ನಿತ್ಯಾನನ್ತಚಿದಾಶ್ರಯೋ ಭವತಿ ತಂ ನಾಥಂ ಹರಿಂ ಶ್ರೀಧರಂ**
**ಮಾಯಾಮೋಹಮಯಂ ವಿಲಾಸರಸಿಕಂ ಪ್ರಾಪ್ತಸ್ಯ ದುಃಖಂ ನ ಮೇ ||**

ತಾ|| (ಕರ್ಮಾನುರೂಪವಾಗಿ ಲೀಲಾವಿಭೂತಿಯನ್ನು ನಿರ್ವಹಿಸುವ ಸ್ವಾಮಿಯನ್ನು ಆಶ್ರಯಿಸಿರುವ ನನಗೆ ಕರ್ಮವಶ್ಯತೆಯೂ ಇಲ್ಲ-ಕ್ಲೇಶವ್ಯಥೆಯೂ ಇಲ್ಲವೆಂದು ಹೇಳುತ್ತಾರೆ.) ಸುಖದುಃಖಜನಕವಾದ ಪುಣ್ಯ-ಪಾಪ-ರೂಪಕರ್ಮಗಳಿಗೆ ನಿರ್ವಾಹಕನಾಗಿಯೂ, ಭೂಲೋಕ – ನರಕ – ಸ್ವರ್ಗಲೋಕಾದಿಗಳಿಗೂ ಸಕಲಪ್ರಾಣಿಗಳಿಗೂ ನಿರ್ವಾಹಕನಾಗಿಯೂ, ಈ ಲೀಲಾವಿಭೂತಿಯಲ್ಲಿ ಅನೇಕ ಮಾಯಾಮೋಹವಿಕಾರಜನಕನಾಗಿ ಲೀಲಾಶ್ರಯನಾಗಿಯೂ ಇರುವ ಸ್ವಾಮಿಯನ್ನು ಆಶ್ರಯಿಸಿರುವ ನನಗೆ ಸ್ವಲ್ಪವೂ ಆಯಾಸವಿಲ್ಲ.

(೮) ಅಲ್ಲಲಿಲಿನ್ಬಮಳವಿಱನ್ದೆಙ್ಗುಮೞಗಮರ್ ಶೂೞೊಳಿಯನ್
ಅಲ್ಲಿಮಲರ್ಮಗಳ್ ಪೋಗಮಯಕ್ಕುಕ್ಕಳಾಗಿಯುಮ್
ನಿಱ್ಕುಮಮ್ಮಾನ್,
ಎಲ್ಲೈಯಿಲ್ ಞಾನತ್ತನ್ ಞಾನಮಃದೇ ಕೊಣ್ಡೆಲ್ಲಾ
ಕ್ಕರುಮಙ್ಗಳುಮ್ ಶೆಯ್,
ಎಲ್ಲೈಯಿಲ್ ಮಾಯನೈಕ್ಕಣ್ಣನೈ ತ್ತಾಳ್ಪಱ್ಱಿ,
ಯಾನೋರ್ತುಕ್ಕಮಿಲನೇ.

ಪ್ರ॥ ಅಲ್ಲಲಿಲ್–ಕ್ಲೇಶಗನ್ಧವೂ ಇಲ್ಲದ, ಇನ್ಬಮ್–ಆನನ್ದಗುಣಕ್ಕೆ, ಅಳವು, ಇಱನ್ದು–ಅವಧಿಯಿಲ್ಲದೆ, ಎಙ್ಗುಮ್ ಅಮರ್–ಸರ್ವತ್ರವಿಸ್ತೃತವಾದ, ಅೞಗು–ಸೌನ್ದರ್ಯದಿಂದ, ಶೂೞ್–ಪರಿವೃತವಾದ (ಕೂಡಿದ), ಒಳಿಯನ್–ತೇಜೋರೂಪಿಯಾದ ಲಾವಣ್ಯವುಳ್ಳವನಾಗಿಯೂ, ಅಲ್ಲಿಮಲರ್ಮಗಳ್–ಪದ್ಮೋದ್ಭವೆಯಾದ ಲಕ್ಷ್ಮೀ ದೇವಿಯೊಡನೆ, ಪೋಗಮ್–ಭೋಗದಿಂದ ಉಂಟಾದ, ಮಯಕ್ಕುಕ್ಕಳಾಗಿಯುಮ್–ಆನನ್ದಮೋಹಗಳುಳ್ಳವನಾಗಿ, ನಿಱ್ಕುಮ್ – ನಿಂತಿರುವ, ಅಮ್ಮಾನ್–ಸರ್ವೇಶ್ವರನಾಗಿಯೂ, ಎಲ್ಲೈಯಿಲ್–ಅಪರಿಚ್ಛಿನ್ನವಾದ, ಅಃದೇ ಞಾನಮೇ – ಆ ಜ್ಞಾನವನ್ನೇ, ಕೊಣ್ಡು–ಸ್ವೀಕರಿಸಿ, ಎಲ್ಲಾಕ್ಕರುಮಙ್ಗಳುಮ್–ಕಾರ್ಯರೂಪವಾದ ಸಕಲ ಲೋಕಗಳನ್ನೂ, ಶೆಯ್–ನಿರ್ವಹಿಸುವವನಾಗಿ, ಎಲ್ಲೈಯಿಲ್ – ನಿಸ್ಸೀಮವಾದ ಞಾನತ್ತನ್ – ಜ್ಞಾನವೈಭವವುಳ್ಳವನಾಗಿಯೂ (ಇರುವ), ಮಾಯನೈ – ಆಶ್ಚರ್ಯ ಚೇಷ್ಟಿತನನ್ನು, ಕಣ್ಣನೈ–ಶ್ರೀಕೃಷ್ಣರೂಪಿಯಾದವನನ್ನು, ತಾಳ್ಪಱ್ಱಿ–ಪಾದಗಳನ್ನು ಆಶ್ರಯಿಸಿ, ಯಾನ್–ನಾನು, ಓರ್ತುಕ್ಕಮಿಲನೇ – ಒಂದು ದುಃಖವೂ ಇಲ್ಲದವನೇ ಆಗಿದೇನೆ.

( ಸ–ಗಾ–ರ ॥ )—

ನಿರ್ದುಃಖಂ ಸುಸುಖಂ ಸದಾಽಪಿ ಪರಿತಸ್ಸೌನ್ದರ್ಯತೇಜೋಮಯಂ
ಭೋಗಾನನ್ದಮಯಂ ಶ್ರಿಯಾ ಕಮಲಯಾ ನಾಥಂ ಹರಿಂ ನಿಸ್ಸಮಮ್ ।
ದಿವ್ಯಜ್ಞಾನನಿಧಿಂ ಸಮಸ್ತಜಗತಾಂ ಸ್ರಷ್ಟಾರಮೇವಾಚ್ಯುತಂ
ಕೃಷ್ಣಂ ಮಾಯಿನಮಾಶ್ರಿತಃ ಪದಯುಗೇ ನಿರ್ದುಃಖಗನ್ಧೋಽಸ್ಮ್ಯಹಮ್ ॥

ತಾ॥ (ನಿತ್ಯವಿಭೂತಿನಾಯಕನಾಗಿದ್ದು ಸಂಕಲ್ಪದಿಂದಲೇ ಜಗದ್ರಕ್ಷಣ ಮಾಡುವ ಸ್ವಾಮಿಯನ್ನು ಆಶ್ರಯಿಸಿರುವ ನನಗೆ ದುಃಖಗನ್ಧವೂ ಇಲ್ಲವೆಂದು

ಹೇಳುತ್ತಾರೆ.) ನಿರತಿಶಯಾನನ್ದಮಯನಾಗಿಯೂ, ಸೌನ್ದರ್ಯ ಲಾವಣ್ಯಾದಿ ಪರಿಪೂರ್ಣನಾಗಿಯೂ, ಲಕ್ಷ್ಮೀಕಾನ್ತನಾಗಿಯೂ, ಆನನ್ದವೋಹವಶ್ಯನಾಗಿಯೂ, ದಿವ್ಯಜ್ಞಾನದಿಂದ ಸಕಲಲೋಕನಿರ್ವಾಹಕನಾಗಿಯೂ ಇರುವ ಮಾಯಾಚೇಷ್ಟಿತನಾದ ಶ್ರೀಕೃಷ್ಣನ ಪಾದಗಳನ್ನು ಆಶ್ರಯಿಸಿರುವ ನನಗೆ ಒಂದುದುಃಖವೂ ಇಲ್ಲ.

(೯) ತುಕ್ಕಮಿಲ್ ಞಾನಚ್ಚುಡರೊಳಿ ಮೂರ್ತ್ತಿ,
ತುೞಾಯ್ ಅಲಙ್ಗಲ್ ಪೆರುಮಾೞ್,
ಮಿಕ್ಕ ಪಲ್ಮಾಯಙ್ಗಳಾಲ್ ವಿಕಿರುತಮ್ಶೆಯ್ದು
ವೇಣ್ಡುಮುರುವುಕೊಣ್ಡು,
ನಕ್ಕಪಿರಾನೋಡಯನ್ಮುದಲಾಕ ವೆಲ್ಲಾರುಮೆವ್ವೈಯುಮ್,
ತನ್ನುಳ್
ಒಕ್ಕವೊಡುಙ್ಗ ವಿೞುಙ್ಗವಲ್ಲಾನೈ ಪ್ಪೆಱ್ಱೊನ್ರುಮ್
ತಳರ್ವಿಲನೇ.

ಪ್ರ॥ತುಕ್ಕಮಿಲ್–ದುಃಖಸ್ಪರ್ಶವಿಲ್ಲದ, ಞಾನಮ್–ಜ್ಞಾನವುಳ್ಳವನಾಗಿಯೂ, ಶುಡರೊಳಿಮೂರ್ತ್ತಿ – ಅತ್ಯುಜ್ಜ್ವಲ ತೇಜೋಮಯ ವಿಗ್ರಹವುಳ್ಳವನಾಗಿಯೂ, ತುೞಾಯ್ ಅಲಙ್ಗಲ್ – ತುಳಸೀಮಾಲಾಲಂಕೃತನಾಗಿಯೂ, ಪೆರುಮಾೞ್ – ಸರ್ವಾಧಿಕನಾಗಿಯೂ, ಮಿಕ್ಕ–ಅನವಧಿಕಾತಿಶಯವಾದ, ಪಲ್ಮಾಯಙ್ಗಳಾಲ್–ಅನೇಕ ಮಾಯಾಚೇಷ್ಟಿತಗಳಿಂದ, ವೇಣ್ಡುಮ್ ಉರುವು–ಬೇಕಾದ ರೂಪಗಳನ್ನು, ಕೊಣ್ಡು–ಧರಿಸಿ, ವಿಕಿರುತಮ್ಶೆಯ್ದು – ನಾನಾಚೇಷ್ಟಾವಿಕಾರಗಳನ್ನು ಮಾಡಿ, ನಕ್ಕಪಿರಾನೋಡು – ದಿಗಮ್ಬರನಾದ ಈಶ್ವರನೆಂಬ ರುದ್ರನೊಡನೆ, ಅಯನ್ – ಅಜನೆಂದು ಪ್ರಸಿದ್ಧನಾದ ಬ್ರಹ್ಮನೇ, ಮುದಲಾಕ–ಮೊದಲಾಗಿ, ಎಲ್ಲಾರುಮ್–ಎಲ್ಲಾ ಚೇತನರನ್ನೂ, ಎವ್ವೈಯುಮ್–ಎಲ್ಲಾ ಅಚೇತನವಸ್ತುಗಳನ್ನೂ, ಒಕ್ಕ–ಸಮಾನವಾಗಿ (ತಾರತಮ್ಯವಿಲ್ಲದಂತೆ), ತನ್ನುಳ್ ಒಡುಙ್ಗ – ತನ್ನಲ್ಲಿಯೇ ಅಡಗಿ ಇರುವಂತೆ, ವಿೞುಙ್ಗವಲ್ಲಾನೈ–ನುಂಗಬಲ್ಲ (ವಟದಳಶಾಯಿಯಾದ) ರಕ್ಷಕನನ್ನು, ಪೆಱ್ಱು–ಹೊಂದಿ, ಒನ್ರುಮ್ ತಳರ್ವು ಇಲನ್–(ನಾನು) ಒಂದುವಿಧವಾದ ಅಶಕ್ತಿಯೂ ಇಲ್ಲದವನಾಗಿದೇನೆ.

( ಸ-ಗಾ-ರ || )—

**ದುಃಖಸ್ಪರ್ಶವಿಹೀನಮುಜ್ಜ್ವಲಮತಿಂ ತೇಜೋನಿಧಿಂ ಭೂಷಿತಂ**
**ದೇವಂ ಮೇ ತುಲಸೀಸ್ರಜಾಽಪ್ಯಭಿಮತಸ್ವೇಚ್ಛಾತ್ತಮಾಯಾತನುಮ್ |**
**ನಾನಾಚೇಷ್ಟಿತಮಾಶ್ರಿತಂ ಚ ಸಕಲೈರ್ಬ್ರಹ್ಮಾದಿರುದ್ರಾದಿಭಿ-**
**ಸ್ಸ್ವಾಂಶೈರ್ವಿಶ್ವಭುಜಂ ಶ್ರಿತೋಽಸ್ಮಿ! ನ ಹಿ ಮೇ ಶಕ್ತ್ಯಾದಿಹಾನಿಃ ಕ್ವಚಿತ್||**

ತಾ|| (ಅಘಟಿತಘಟನಾಸಮರ್ಥನಾದ ವಟದಳಶಾಯಿಯನ್ನು ಹೊಂದಿರುವ ನನಗೆ ಒಂದು ಶ್ರಮವೂ ಇಲ್ಲವೆಂದು ಹೇಳುತ್ತಾರೆ) ದುಃಖಗನ್ಧವೂ ಇಲ್ಲದ ದಿವ್ಯಜ್ಞಾನವುಳ್ಳ ಅತ್ಯುಜ್ಜ್ವಲ ತೇಜೋಮೂರ್ತಿಯಾಗಿಯೂ, ತುಳಸೀಮಾಲಾಲಂಕೃತನಾಗಿಯೂ, ಸರ್ವಾಧಿಕನಾಗಿಯೂ, ನಿರವಧಿಕ ಮಾಯಾಚೇಷ್ಟಿತಗಳಿಂದ ನಾನಾರೂಪಗಳನ್ನು ಧರಿಸಿ ಬ್ರಹ್ಮರುದ್ರಾದಿಗಳನ್ನೂ ಸಕಲ ಚೇತನಾಚೇತನ ಪ್ರಪಂಚಗಳನ್ನೂ ತನ್ನಲ್ಲಿಯೇ ಅಡಗಿಸಿಕೊಂಡು ರಕ್ಷಿಸಬಲ್ಲ(ವಟದಳಶಾಯಿಯಾದ) ಸರ್ವೇಶ್ವರನನ್ನುಹೊಂದಿ ನಾನು ಯಾವವಿಧವಾದ ಅಶಕ್ತಿಯೂ ಇಲ್ಲದವನಾಗಿದೇನೆ.

(೧೦) ತಳರ್ವಿನ್‌ಱಿಯೇ ಯೆನ್ಱುಮೆಙ್ಗುಮ್ ಪರನ್ದ
ತನಿಮುದಲ್ ಞಾನಮೊನ್ಱಾಯ್,
ಅಳವುಡೈ ಯೈಮ್ಪುಲನ್‌ಕಳುಕ್ಕಱಿಯಾವಕೈಯಾಲ್ ಅರುವಾಕಿ
ನಿಱ್ಕುಮ್,
ವಳರೊಳಿ ಯೀಶನೈ ಮೂರ್ತ್ತಿಯೈ ಪ್ಪೂತಙ್ಗಳೈನ್ದೈ
ಯಿರುಶುಡರೈ,
ಕಿಳರೊಳಿಮಾಯನೈ ಕ್ಕಣ್ಣನೈ ತ್ತಾಳ್‌ಪಱ್ಱಿ
ಯಾನೆನ್ಱುಮ್ ಕೇಡಿಲನೇ.

ಪ್ರ|| ಎನ್ಱುಮ್- ಸರ್ವಕಾಲದಲ್ಲೂ, ಎಙ್ಗುಮ್-ಸರ್ವದೇಶದಲ್ಲೂ, ತಳರ್ವಿನ್ಱಿಯೇ-ಅಶಕ್ತಿ ಲೇಶವೂ ಇಲ್ಲದಂತೆ (ಪೂರ್ತಿಯೊಡನೆ), ಪರನ್ದ-ವ್ಯಾಪಿಸಿ ಇರುವವನಾಗಿಯೂ, ತನಿ-ಅದ್ವಿತೀಯವಾದ, ಮುದಲ್ ಞಾನಮ್ ಒನ್ಱಾಯ್-ಕಾರಣಭೂತವಾದ ಜ್ಞಾನೈಕಾಕಾರನಾಗಿಯೂ, ಅಳವುಡೈ - ವಿಷಯಪರಿಚ್ಛೇದವುಳ್ಳ, ಐಮ್ಪುಲನ್‌ಕಳ್ - ಐದು ಇನ್ದ್ರಿಯಗಳಿಗೂ, ಅಱಿಯಾವಕೈ-ಅಗೋಚರವಾಗುವ

ರೀತಿಯಲ್ಲಿ, ಅರುವಾಕಿ-ನಿರವಯವಸ್ವರೂಪನಾಗಿ, ನಿಱ್ಕುಮ್ - ನಿಂತಿರುವವನಾಗಿಯೂ, ವಳರ್-ಅಭಿವೃದ್ಧವಾದ, ಒಳಿ-ತೇಜಸ್ಸುಳ್ಳ, ಈಶನ್ನೈ - ಸ್ವಾಮಿಯಾಗಿಯೂ, ಮೂರ್ತ್ತಿಯೈ - ಅಸಾಧಾರಣ ದಿವ್ಯವಿಗ್ರಹಯುಕ್ತನಾಗಿಯೂ, ಭೂತಙ್ಗಳೈನ್ದೈ - ಪಂಚಭೂತಗಳನ್ನೂ, ಇರುಶುಡರ್ಯ-ಚಂದ್ರಾದಿತ್ಯರನ್ನೂ ತನ್ನ ಆಕಾರವಾಗಿ ಉಳ್ಳ, ಕಿಳರ್ ಒಳಿಮಾಯನ್ನೈ - ಉದ್ಬುದ್ಧವಾದ ಪ್ರಕಾಶವುಳ್ಳ ಮಾಯಾಚೇಷ್ಟಿತಗಳುಳ್ಳವನಾದ, ಕಣ್ಣನ್ನೈ - ಶ್ರೀಕೃಷ್ಣನನ್ನು, ತಾಳ್‌ಪತ್ತಿ - ಅವನ ಪಾದಗಳನ್ನು ಆಶ್ರಯಿಸಿ ಭಜಿಸಿ ಇರುವ, ಯಾ-ನಾನು, ಎನ್ಱುಮ್ ಕೇಡು ಇಲನ್-ಎಂದಿಗೂ ಅಪಾಯವಿಲ್ಲದವನಾಗಿದೇನೆ.

( ಸ-ಗಾ-ರ ॥ )—

**ಸರ್ವತ್ರಾಪಿ ಚ ಸರ್ವದಾಽಪಿ ಚ ವಿಭುಂ ಚೈಕಂ ಪರಂ ಕಾರಣಂ**
**ಜ್ಯೋತಿರ್ಜ್ಞಾನನಿಧಿಂ ತ್ವತೀನ್ದ್ರಿಯಮಹಾತೇಜೋನಿಧಿಂ ಸ್ವಾಮಿನಮ್।**
**ಚನ್ದ್ರಾರ್ಕಾತ್ಮಕಪಞ್ಚಭೂತಮಯಮಪ್ಯಾಶ್ರಿತ್ಯ ಮಾಯಾವಿನಃ**
**ಕೃಷ್ಣಸ್ಯಾಂಘ್ರಿಯುಗಂ ಪ್ರಪದ್ಯ ನ ಹಿ ಮೇ ಹಾನಿಃ ಕ್ವಚಿಜ್ಜಾತುಚಿತ್॥**

ತಾ॥ (ಸರ್ವಾನ್ತರಾತ್ಮಭೂತನಾದ ಕೃಷ್ಣನನ್ನು ಹೊಂದಿದ ನನಗೆ ಯಾವ ಅಪಾಯವೂ ಇಲ್ಲವೆಂದು ಹೇಳುತ್ತಾರೆ.) ಸರ್ವಕಾಲ ಸರ್ವದೇಶಗಳಲ್ಲೂ ಪರಿಪೂರ್ಣವಾದ ದಿವ್ಯಜ್ಞಾನಸ್ವರೂಪನಾಗಿಯೂ, ಸಕಲೇನ್ದ್ರಿಯಗಳಿಗೂ ಅಗೋಚರವಾಗುವಂತೆ ನಿರವಯವಸ್ವರೂಪನಾಗಿಯೂ, ದಿವ್ಯತೇಜೋಮೂರ್ತಿಯಾದ ಸ್ವಾಮಿಯಾಗಿಯೂ, ಪಂಚಭೂತ-ಚನ್ದ್ರಾದಿತ್ಯರನ್ನೂ ತನ್ನ ಆಕಾರವಾಗಿ ಉಳ್ಳ ದಿವ್ಯಪ್ರಕಾಶ ಮಾಯಾಚೇಷ್ಟಿತನಾಗಿಯೂ ಇರುವ ಶ್ರೀಕೃಷ್ಣನ ಪಾದಗಳನ್ನು ಭಜಿಸಿ ಇರುವ ನನಗೆ ಯಾವಹಾನಿಯೂ ಇಲ್ಲ.

(೧೧) ಕೇಡಿಲ್ ವಿೞುಪ್ಪುಕೞ್ ಕೇಶವನ್ನೈ ಕ್ಕುರುಕೂರ್
ಚ್ಚಡಕೋಪನ್ ಶೊನ್ನ,
ಪಾಡಲೋರಾಯಿರತ್ತುಳ್ಳಿವೈಯುಮೊರುಪತ್ತುಮ್
ಪಯಿಱ್ಱ ವಲ್ಲಾರ್‌ಕಳ್ಕ್ಕು, ಅವರ್
ನಾಡುನಕರಮುಮ್ ನನ್ಗುಡನ್ ಕಾಣ
ನಲನಿಡೈಯೂರ್‌ದಿ ಪಣ್ಣಿ,
ವೀಡುಮ್‌ಪೆರುತ್ತಿತ್ತನ್ನೊವುಲಕುಕ್ಕುಮ್
ತರುವೊರುನಾಯಕಮೇ.

ಪ್ರ|| ಕೇಡಿಲ್‌-ನಾಶರಹಿತವಾಗಿ, ವಿೞುಪ್ಪುಕ್ಕೞ್ - ಮಹಾಕಲ್ಯಾಣಗುಣ ಪ್ರಸಿದ್ಧಿಯುಳ್ಳ, ಕೇಶವನ್ನೈ – ಕೇಶಿಧ್ವಂಸಕನಾದ ಕೃಷ್ಣನನ್ನು, ಕುರುಕೂರ್‌ ಶಡಕೋಪರ್‌- ಕುರುಕಾಪುರಿಯ ಶ್ರೀಶಠಾರಿಮುನಿಯು, ಶೊನ್ನ–ಸ್ತುತಿಸಿ ರಚಿಸಿದ, ಪಾಡಲ್‌–ಗಾನರೂಪವಾದ, ಓರಾಯಿರತ್ತುಳ್‌ – ಅದ್ವಿತೀಯವಾದ ಸಹಸ್ರಪದ್ಯ ಮಾಲೆಯೊಳು, ಒರು – ಒಂದು (ಭಗವದನುಭವಪ್ರತಿಪಾದಕವಾದ), ಇವ್ವೈಪತ್ತುಮ್‌ – ಈ ದಶಕವನ್ನು, ಪಯಿಱ್ಱವಲ್ಲಾರ್‌ಕಳ್ಕು – ಅಭ್ಯಸಿಸಬಲ್ಲವರಿಗೆ, ಅವರ್‌ – ಆ ಕೃಷ್ಣನು, ನಾಡುಮ್‌ – ಗ್ರಾಮಗಳಲ್ಲಿರುವವರೂ, ನಕರಮುಮ್‌ – ನಗರಗಳಲ್ಲಿರುವವರೂ, ನನ್ಗುಡನ್‌ಕಾಣ – ಶ್ಲಾಘಾರೂಪವಾದ ಶ್ರೇಯಸ್ಸಿನೊಡನೆ ಕಾಣುವಂತೆ, ನಲನಿಡೈ–ಸಂಪತ್ತಿನೊಡನೆ, ಊರ್‌ದಿ ಪಣ್ಣಿ–ಸದ್ವೃತ್ತಿಯನ್ನು ಉಂಟುಮಾಡಿ, ವೀಡು ಪೆರುತ್ತಿ – ಮೋಕ್ಷಾನಂದವನ್ನು ಕೊಟ್ಟು, ತನ್‌ ಮೂವುಲಕುಕ್ಕುಮ್‌–ತನ್ನ ಮೂರುಲೋಕಗಳಿಗೂ (ಸಕಲಲೋಕಗಳಿಗೂ), ಒರುನಾಯಕಮೇ – ಅದ್ವಿತೀಯವಾದ ನಾಯಕತ್ವವನ್ನೇ (ಸಾಮ್ರಾಜ್ಯವನ್ನೇ), ತರುಮ್‌ - ಕೊಡುವನು

( ಸ–ಗಾ-ರ || )—

ನಿರ್ದೋಷಂ ಶುಭಸದ್ಗುಣಾಮೃತನಿಧಿಂ ತಂ ಕೇಶವಂ ಶ್ರೀಹರಿಂ
ಸ್ತೋತುಂ ಪ್ರಾಹ ಸಹಸ್ರಮತ್ರ ಕುರುಕಾಧೀಶಶ್ಶಠಾರಿರ್ಮುನಿಃ |
ತತ್ರೇದಂ ದಶಕಂ ಪಠನ್ತಿ ಭುವಿ ಯೇ ತೇಷಾಂ ಹರಿಶ್ಶ್ರೀಧರ–
ಸ್ಸ್ವಾರಾಜ್ಯಂ ಚ ನಿರಙ್ಕುಶಂ ವಿತನುತೇ ಶ್ರೇಯಾಂಸಿ ಮುಕ್ತಿಂ ಪರಾಮ್‌ ||

ತಾ|| (ಈ ದಶಕದ ಪಠನಫಲವು ಸಕಲಸಮೃದ್ಧಿಯೊಡನೆ ಕೂಡಿದ ವೈಕುಂಠ ಲೋಕದ ಸ್ವಾರಾಜ್ಯಪ್ರಾಪ್ತಿಯೆಂದು ಹೇಳುತ್ತಾರೆ.) ನಿತ್ಯನಿರತಿಶಯ—ಸಕಲ ಕಲ್ಯಾಣಗುಣಾಕರನಾದ ಕೇಶವನನ್ನು ಸ್ತೋತ್ರಮಾಡುವುದಕ್ಕಾಗಿ ಶ್ರೀ ಕುರುಕಾಪುರೀನಿರ್ವಾಹಕರಾದ ಶಠಾರಿ ಮುನಿವರ್ಯರು ಗಾನರೂಪವಾಗಿ ರಚಿಸಿದ ಸಹಸ್ರಪದ್ಯಮಾಲೆಯೊಳು ಈ ದಶಕವನ್ನು ಅಭ್ಯಸಿಸಬಲ್ಲವರಿಗೆ ಆ ಕೇಶವನೇ ಗ್ರಾಮ ನಗರಾದಿ ಸಕಲಲೋಕಗಳೂ ಕೊಂಡಾಡುವಂತೆ ಸಂಪತ್ಸಮೃದ್ಧಿಯನ್ನೂ ಉಂಟುಮಾಡಿ, ಮೋಕ್ಷಾನಂದವನ್ನೂ ಕೊಟ್ಟು ತ್ರಿಲೋಕಸಾಮ್ರಾಜ್ಯವನ್ನೂ ತರುವನು.

( ದ್ರ-ಉ-ಸಂ )—

ಭೂಯೋಽವತೀರ್ಯ ಭುವಿ ದಿವ್ಯವಪುಸ್ಸ್ವಕೀಯಂ
ಪ್ರತ್ಯಕ್ಷಯನ್ತಮಖಿಲಾಂಶ್ಚ ಗುಣಾನನನ್ತಮ್ |
ಸ್ತುತ್ವಾ ಮುನಿಸ್ಸ್ವಚರಿತಾರ್ಥತಯಾ ನ ಕಿಞ್ಚಿ
ದ್ದುಃಖಂ ಮಮೇತ್ಯತಿತರಾಂ ದಶಮೇ ತುತೋಷ ||

( ದ್ರ-ಉ-ತಾ-ರ )—

ಪ್ರಾದುರ್ಭಾವಾನುಭಾವಾತ್ ಪರಿಜನವಿಭವಾತ್ ಪಾವನಾಲಙ್ಕ್ರಿಯತ್ವಾ-
ಜ್ಜೈತ್ರವ್ಯಾಪಾರಯೋಗಾದಘಟಿತಘಟನಾದ್ದೇವಭಾವಪ್ರಸಿದ್ಧೇಃ |
ಆಶ್ಚರ್ಯಕ್ರೀಡನತ್ವಾತ್ ಸರಸಿಜನಿಲಯಾನನ್ದನಾಚ್ಛನ್ದವೃತ್ತೇ-
ರೈಶ್ವರ್ಯವ್ಯಕ್ತಿಮತ್ತ್ವಾದಘಶಮನತನುಂ ಕೇಶವಂ ವ್ಯಾಜಹಾರ ||

ಏವಂ ಸೌನ್ದರ್ಯಭೂಮ್ನಾ ತನುವಿಹಿತಜಗತ್ಕೃತ್ಯಸೌಭಾಗ್ಯಯೋಗಾತ್
ಸ್ವೇಚ್ಛಾಸೇವ್ಯಾಕೃತಿತ್ವಾನ್ನಿಖಿಲತನುತಯೋನ್ಮಾದದಾನಾರ್ಹಕತ್ವಾತ್ |
ಲಭ್ಯಾರ್ಚಾವೈಭವತ್ವಾದ್ಗುಣರಸಿಕಗುಣೋತ್ಕರ್ಷಣಾದಕ್ಷಕೃಷ್ಟೇಃ
ಸ್ತುತ್ಯತ್ವಾತ್ಪಾಪಭಙ್ಗಾಚ್ಛುಭಸುಭಗತನುಂ ಪ್ರಾಹ ನಾಥಂ ತೃತೀಯೇ ||

---

(ಈ ದಶಮದಶಕದ ಸಾರಾಂಶ)—

ಈ ಹತ್ತನೆಯ ದಶಕದಲ್ಲಿ ಶ್ರೀ ಶಠಾರಿಮುನಿವರ್ಯರು—ಸರ್ವೇಶ್ವರನಾಗಿಯೂ, ವಿರೋಧಿನಿವರ್ತಕನಾಗಿಯೂ, ಸರ್ವರಕ್ಷಕನಾಗಿಯೂ, ಆಪನ್ನಿವಾರಕನಾಗಿಯೂ, ಕ್ಷೀರಾಬ್ಧಿಶಾಯಿಯಾಗಿ ಯೋಗನಿದ್ರಾಪರವಶನಾಗಿಯೂ, ವಟದಳ ಶಾಯಿಯಾಗಿಯೂ, ಜಗದ್ರಕ್ಷಣದೀಕ್ಷಿತನಾಗಿಯೂ ಇರುವ ಸ್ವಾಮಿಯನ್ನು ಆಶ್ರಯಿಸಿದ ನನಗೆ ಯಾವಭೀತಿಯೂ, ಯಾವದುಃಖವೂ ಯಾವ ಅಪಾಯವೂ ಇಲ್ಲವೆಂದು ಹೇಳಿ, ಈ ದಶಕಪಠನದಿಂದ ಸಕಲಲೋಕ ಸಾಮ್ರಾಜ್ಯವುಂಟಾಗುವುದೆಂದು ಫಲವನ್ನೂ ಸೂಚಿಸಿರುತ್ತಾರೆ.

---

(ಈ ತೃತೀಯಶತಕದ ಸಾರಾಂಶ)—

ಈ ತೃತೀಯಶತಕದಲ್ಲಿ—(೧) ಚೇತನನಿಗೆ ಶೇಷತ್ವವು ಸ್ವಾಭಾವಿಕವೆಂದೂ (೨) ದೇಹಸಮ್ಬನ್ಧಾದಿಗಳು ನಿವರ್ತನೀಯವೆಂದೂ (೩) ಶೇಷತ್ವವು ಪ್ರಾರ್ಥನೀಯವೆಂದೂ (೪) ಈಶ್ವರನೊಡನೆ ಅಪೃಥಕ್ಸಿದ್ಧಸಮ್ಬನ್ಧವೂ ಶೇಷತ್ವರೂಪವೆಂದೂ

(೫) ಶೇಷತ್ವದಫಲವು ಪ್ರೇಮಾತಿಶಯವೆಂದೂ (೬) ಶೇಷತ್ವವು ಅರ್ಚಾವತಾರ ಪರ್ಯನ್ತವಾದುದೆಂದೂ (೭) ಶೇಷತ್ವವು ತದೀಯ ಶೇಷತ್ವಪರ್ಯನ್ತವಾದುದೆಂದೂ (೮) ಭಗವದನುಭವವು ತದೀಯ ಪಾರತನ್ತ್ರ್ಯಜನಕವೆಂದೂ (೯) ವಾಚಿಕಾನುಭವವೇ ವಿಲಕ್ಷಣವಾದುದೆಂದೂ (೧೦) ಭಗವನ್ತನ ಅನುಭವದಿಂದ ಸಕಲ ವಿರೋಧಿ ನಿವೃತ್ತಿಪೂರ್ವಕ ಸರ್ವಸಾಮ್ರಾಜ್ಯಸಿದ್ಧಿಯೆಂದೂ—ಕ್ರಮೇಣ ಹತ್ತು ದಶಕಗಳಲ್ಲೂ ಪ್ರತಿಪಾದಿತವಾಗಿದೆ.

**ಈ ಪ್ರಕಾರ ಈ ತೃತೀಯ ಶತಕದಲ್ಲಿ ಭಗವದೇಕಾನುಭವವು ಪ್ರತಿಪಾದಿತವಾಗಿದೆ**

---

ಶ್ರೀಮದ್ಯಾದವಶೈಲಶೃಂಗರವಿಣಾ ಶ್ರೀಕಲ್ಕಿಸಿಂಹಾತ್ಮನಾ
ಶ್ರೀಮಲ್ಲೇಶ್ವರಕೃಷ್ಣಸನ್ನಿಧಿಜುಷಾ ಕಲ್ಯಾಣಪುರ್ಯಾಮಿಹ ।
ಸರ್ವೇಷಾಂ ಜಗತಾಂ ತಮಶ್ಶಮಯತಾ ಕರ್ಣಾಟವಾಣ್ಯಾಽಧುನಾ
ವ್ಯಾಖ್ಯಾತಂ ಶತಕಂ ತೃತೀಯಮತುಲಂ ಗಾಥಾಸಹಸ್ರೇ ಮುನೇಃ ॥

ಸಹಸ್ರಗಾಥಾರತ್ನಾವಳ್ಯಾ ಖ್ಯಾ ವ್ಯಾಖ್ಯಾ ಮಯಾ ಕೃತಾ ।
ಗೈರ್ವಾಣೀ ! ಶತಕಂ ತತ್ರ ತೃತೀಯಂ ವಿವೃತಂ ಶುಭಮ್ ॥
ಮಮ ಶ್ರೀಕಲ್ಕಿಸಿಂಹಸ್ಯ ಭಕ್ತಾ ಭಗವತೋ ಹರೇಃ ।
ಶಠಾರಿವಕ್ತ್ರ್ಯಯಂ ಭೋಗ್ಯಾಃ ಪರಮಾನನ್ದಮಾಪ್ನುಯುಃ ॥

---

ಇಂತು ಶ್ರೀ ಶಠಾರಿಮುನಿವರ್ಯ ವಿರಚಿತವಾದ
ತಿರುವಾಯ್ಮೊಳಿಯೆಂಬ
ಸುಪ್ರಸಿದ್ಧವಾದ ಸಹಸ್ರಗಾಥಾತ್ಮಕ--ದ್ರಾವಿಡ ದಿವ್ಯಪ್ರಬನ್ಧದ
ಲಲಿತಸರಣಿಯೆಂಬ ಕರ್ಣಾಟಭಾಷಾ ಟೀಕೆಯೊಳ್
ತೃತೀಯಶತಕದ ವ್ಯಾಖ್ಯಾನವು ಇಲ್ಲಿಗೆ
ಸಂಪೂರ್ಣವಾಗಿದೆ.

---

ಶ್ರೀಮತೇ ಶಠಕೋಪಾಯ ನಮಃ
ಶ್ರೀಮತೇ ಕಲ್ಕಿಸಿಂಹಾಯ ಭಗವತೇ ನಮಃ.

ವೆ. ಬಿ. ಸುಬ್ಬಯ್ಯ ಅಂಡ್ ಸನ್ಸ್, ಬೆಂಗಳೂರು ಸಿಟಿ.